KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜನವರಿ ೨೭, ೨೦೧೧ (ಮಾಘ ೭, ಶಕ ವರ್ಷ ೧೯೩೨) | ಸಂಚಿಕೆ ೪ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು**

**ಬಹಿರಂಗ ಹರಾಜು ಮಾರಾಟ ಪ್ರಕಟಣೆ**

**ಸಂಖ್ಯೆ : ಎ4/ವಾಹನ ವಿಲೆ./ಸಿಆರ್:03/07-08, ಬೆಂಗಳೂರು, ದಿನಾಂಕ:17-01-2011**

ಈ ಮೂಲಕ ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದರೆ ಇಲಾಖೆಯಲ್ಲಿರುವ ಈ ಕೆಳಕಂಡ ವಾಹನಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ನಿರುಪಯುಕ್ತ ವಾಹನಗಳೆಂದು ದೃಢೀಕರಣ ನೀಡಿರುವುದರಿಂದ ಇವುಗಳನ್ನು ದಿನಾಂಕ:07.02.2011ರಂದು ಪೂರ್ವಾಹ್ನ 11.00 ಗಂಟೆಗೆ ಸರಿಯಾಗಿ ಕೆ.ಆರ್.ಪುರಂ ವಲಯ ಕಛೇರಿಯ ಸಂಕೀರ್ಣದಲ್ಲಿ ವಾಹನ ಹೇಗಿದೆಯೋ ಹಾಗೇ ಇರುವ ಸ್ಥಿತಿಯಲ್ಲಿಯೇ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಹಿರಂಗ ಹರಾಜಿನಲ್ಲಿ ಪಾಲುಗೊಳ್ಳಬಹುದು. ದಿನಾಂಕ:07.02.2011 ರಂದು ಬಹಿರಂಗ ಹರಾಜು ನಡೆಯದಿದ್ದಲ್ಲಿ ಮರು ಬಹಿರಂಗ ಹರಾಜನ್ನು ದಿನಾಂಕ:17.02.2011ರಂದು 11.00 ಗಂಟೆಗೆ ಇದೇ ಸ್ಥಳದಲ್ಲಿ ನಡೆಸಲಾಗುವುದು.

| ಕ್ರಮ ಸಂಖ್ಯೆ | ವಾಹನದ ನೋಂದಣಿ ಸಂಖ್ಯೆ | ವಾಹನದ ಮಾದರಿ | ಹರಾಜಿನ ದಿನಾಂಕ |
|---|---|---|---|
| 1. | KA-01-G-8370 | L & T Excavator (Model not known) | 07.02.2011 |
| 2. | KA-01-G-8349 | L & T Excavator (Model not known) | 07.02.2011 |
| 3. | CAG-1196 | Allwyn Nissan (Model-1986)-LGV | 07.02.2011 |
| 4. | CAG-1124 & 1225 | Power Tiller & Trailor (Model-1984) | 07.02.2011 |
| 5. | CAG-4341 & 4342 | Power Tiller & Trailor (Model-1984) | 07.02.2011 |

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ನಗರ ವಿಭಾಗ, ಬೆಂಗಳೂರು.

ಪಿ.ಆರ್.32

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಂಕ್ಷಿಪ್ತ ಟೆಂಡರು ಪ್ರಕಟಣೆ ಸಂಖ್ಯೆ:58: 2010-11/ ದಿನಾಂಕ:12ನೇ ಜನವರಿ, 2011**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು, ಇವರ ವತಿಯಿಂದ ಕೆಳಗಿನ ಕಾಮಗಾರಿಗಳ ಬಗ್ಗೆ ದ್ವಿಲಕೋಟೆ ಪದ್ಧತಿಯಲ್ಲಿ ಇ-ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. (ಕೆಡಬ್ಲ್ಯೂ-4)

| ಕ್ರ. ಸಂ. | ಕಾಮಗಾರಿ ವಿವರಣೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಇಎಂಡಿ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|
| | **5054– ರಸ್ತೆ ಮತ್ತು ಸೇತುವೆಗಳು: ಅಪೆಂಡಿಕ್ಸ್–ಇ** | | |
| 1. | ಗುಬ್ಬಿ–ತಾ: ನಿಟ್ಟೂರು. ಸಂಪಿಗೆ ರಸ್ತೆ ಅಭಿವೃದ್ಧಿ ಕಾಮಗಾರಿ | 200.00 | 3.00 |
| 2. | ಚಿ.ನಾ.ಹಳ್ಳಿ–ತಾ: ಮತಿಘಟ್ಟ–ಕಣಕಟ್ಟೆ ರಸ್ತೆಯ ಆಯ್ದಭಾಗಗಳಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿ | 300.00 | 4.50 |
| 3. | ತಿಪಟೂರು.ತಾ: ಎಡೆಯೂರು–ತಿಪಟೂರು ರಸ್ತೆ ಅಭಿವೃದ್ಧಿ ಕಾಮಗಾರಿ (ಕಿಮೀ 37.20 ರಿಂದ 51.00 ಕಿಮೀ ವರೆಗೆ | 100.00 | 2.00 |

**ಟೆಂಡರ್ ಪ್ರಕ್ರಿಯೆ ವಿವರಗಳು:**

1) ಇ–ಟೆಂಡರಿಗೆ ಸಂಬಂಧಿಸಿದ ವಿಚಾರಣೆ ಮತ್ತು ಸ್ಪಷ್ಟೀಕರಣಗಳಿಗೆ ಕೊನೆಯ ದಿನಾಂಕ ಮತ್ತು ವೇಳೆ: 27.01.2011ರ 17.00 ಗಂಟೆವರೆಗೆ
2) ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ದಿನಾಂಕ:25.01.2011 ರಿಂದ 29.01.2011ರ 16–00 ಗಂಟೆಯವರೆಗೆ ಪಡೆಯಬಹುದಾಗಿದೆ.
3) ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆ ದಿನಾಂಕ ಮತ್ತು ವೇಳೆ:29.01.2011 ರ 16–00 ಗಂಟೆಯವರೆಗೆ.
4) ತಾಂತ್ರಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ: 31.01.2011: 11–00 ಗಂಟೆಯವರೆಗೆ.
5) ಆರ್ಥಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ: 02.02.2011: 11–00 ಗಂಟೆಯವರೆಗೆ.

ಲೋಕೋಪಯೋಗಿ ಇಲಾಖೆ ಮತ್ತು ಇ–ಟೆಂಡರಿಂಗ್‌ನಲ್ಲಿ ನೊಂದಾಯಿತ ಗುತ್ತಿಗೆದಾರರು ಇ–ಟೆಂಡರಿಂಗ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕಾರ್ಯಪಾಲಕ ಇಂಜಿನಿಯರ್, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು ಕರ್ನಾಟಕ ರಾಜ್ಯ ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಹಾಗೂ ವೆಬ್‌ಸೈಟ್ ಸಂ: www.eproc.karnataka.gov.in ರಲ್ಲಿ ಪಡೆಯಬಹುದಾಗಿದೆ. ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,
ಲೋಕೋಪಯೋಗಿ ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು.

ಪಿ.ಆರ್.30

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

### ಸಂಕ್ಷಿಪ್ತ ಟೆಂಡರು ಪ್ರಕಟಣೆ ಸಂಖ್ಯೆ:57: 2010–11/ ದಿನಾಂಕ:12ನೇ ಜನವರಿ, 2011

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು, ಇವರ ವತಿಯಿಂದ ಉಲ್ಲೇಖಿತದಲ್ಲಿ ಕೆಳಗಿನ ಕಾಮಗಾರಿಗಳ ಟೆಂಡರ್ ಪ್ರಕಟಣೆ ಹೊರಡಿಸಿ ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| ಕ್ರ. ಸಂ. | ಕಾಮಗಾರಿ ವಿವರಣೆ | ಟೆಂಡರಿಗಿಟ್ಟಿರುವ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಇಎಂಡಿ ಮೊತ್ತ ರೂ.ಲಕ್ಷಗಳಲ್ಲಿ | ಅರ್ಹ ದರ್ಜೆ ಗುತ್ತಿಗೆದಾರರು | ಕಾಮಗಾರಿ ಪೂರ್ಣಗೊಳಿಸಲು ನಿಗದಿ ಪಡಿಸಿರುವ ಕಾಲಾವಧಿ |
|---|---|---|---|---|---|
| | **ಲೆಕ್ಕಶೀರ್ಷಿಕೆ 5054– ರಸ್ತೆ ಮತ್ತು ಸೇತುವೆಗಳು: ಅಪೆಂಡಿಕ್ಸ್–ಇ** | | | | |
| 1. | ಕುಣಿಗಲ್–ತಾ: ರಾಹೆ–48 ರಿಂದ ರಾಹೆ 84ರ ವಿವಿಧ ಭಾಗಗಳ ರಸ್ತೆ ಅಭಿವೃದ್ಧಿ | 250.00 | 3.75 | 1ನೇ ದರ್ಜೆ | 6 ತಿಂಗಳು |

**ಟೆಂಡರ್ ಪ್ರಕ್ರಿಯೆ ವಿವರಗಳು:**

1) ಇ–ಟೆಂಡರಿಗೆ ಸಂಬಂಧಿಸಿದ ವಿಚಾರಣೆ ಮತ್ತು ಸ್ಪಷ್ಟೀಕರಣಗಳಿಗೆ ಕೊನೆಯ ದಿನಾಂಕ ಮತ್ತು ವೇಳೆ: 01.02.2011ರ 17.00 ಗಂಟೆವರೆಗೆ
2) ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ದಿನಾಂಕ:30.01.2011 ರಿಂದ 03.02.2011ರ 16–00 ಗಂಟೆಯವರೆಗೆ ಪಡೆಯಬಹುದಾಗಿದೆ.
3) ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆ ದಿನಾಂಕ ಮತ್ತು ವೇಳೆ:03.02.2011 ರ 16–00 ಗಂಟೆಯವರೆಗೆ.
4) ತಾಂತ್ರಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ: 05.02.2011: 11–00 ಗಂಟೆಯವರೆಗೆ.
5) ಆರ್ಥಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ: 07.02.2011: 11–00 ಗಂಟೆಯವರೆಗೆ.

ಲೋಕೋಪಯೋಗಿ ಇಲಾಖೆ ಮತ್ತು ಇ-ಟೆಂಡರಿಂಗ್‌ನಲ್ಲಿ ನೊಂದಾಯಿತ ಗುತ್ತಿಗೆದಾರರು ಇ–ಟೆಂಡರಿಂಗ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕಾರ್ಯಪಾಲಕ ಇಂಜಿನಿಯರ್, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು ಕರ್ನಾಟಕ ರಾಜ್ಯ ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಹಾಗೂ ವೆಬ್‌ಸೈಟ್ ಸಂ: www.eproc.karnataka.gov.in ರಲ್ಲಿ ಪಡೆಯಬಹುದಾಗಿದೆ.

ಕಾರ್ಯಪಾಲಕ ಇಂಜಿನಿಯರ್,
ಪಿ.ಆರ್.31 ಲೋಕೋಪಯೋಗಿ ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಂಕ್ಷಿಪ್ತ ಟೆಂಡರು ಪ್ರಕಟಣೆ ಸಂಖ್ಯೆ:54:2010–11/ ದಿನಾಂಕ:11ನೇ ಜನವರಿ, 2011**

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು, ಇವರ ವತಿಯಿಂದ ಕೆಳಗಿನ ಕಾಮಗಾರಿಗಳ ಬಗ್ಗೆ ದ್ವಿಲಕೋಟೆ ಪದ್ಧತಿಯಲ್ಲಿ ಇ-ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| ಕ್ರ ಸಂ. | ಕಾಮಗಾರಿ ವಿವರಣೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಇಎಂಡಿ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|
| 1. | ತುಮಕೂರು–ತಾ: ತುಮಕೂರು–ಚೇಳೂರು–ಬುಕ್ಕಾಪಟ್ಟಣ (ಟಿ.ಸಿ.ಬಿ.) ರಸ್ತೆಯ ಕಿಮೀ 5–20 ರಿಂದ 10–20 ಕಿಮೀ ವರೆಗೆ ಹಾಗೂ 11–20 ರಿಂದ 12–20ಕಿಮೀ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ. | 600.00 | 9.00 |
| 2. | ಎ) ತುಮಕೂರು–ತಾ:ನಾಗವಲ್ಲಿ–ಹೊನ್ನುಡಿಕೆ–ಶಿವಗಂಗೆ ರಸ್ತೆ ಅಭಿವೃದ್ಧಿ ಕಾಮಗಾರಿ ಮತ್ತು<br>ಬಿ) ತುಮಕೂರು–ತಾ: ರಾಹೆ–206 ರಿಂದ ಚಿಕ್ಕನಾರವಂಗಲ ಮಾರ್ಗ ಟಿ.ಸಿ.ಬಿ. ರಸ್ತೆಗೆ ಸಂಪರ್ಕಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ. (ಪ್ಯಾಕೇಜ್–2) | 625.00 | 9.375 |
| 3. | ತುಮಕೂರು–ತಾ: ರಾಹೆ–94 ರಿಂದ ಸಿದ್ದಗಂಗಾ ಮಠದ ಆವರಣದ ಚಿಮುರ ಸಂಪರ್ಕಿಸುವ ರಸ್ತೆಗಳ ಅಭಿವೃದ್ಧಿ ಕಾಮಗಾರಿ. | 400.00 | 6.00 |
| 4. | ತುಮಕೂರು–ತಾ: ಬೆಳ್ಳಾವಿ ಗ್ರಾಮದ ಹರಿಜನ–ಗಿರಿಜನ ಕಾಲೋನಿಯಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿ. | 125.00 | 2.00 |

**ಟೆಂಡರ್ ಪ್ರಕ್ರಿಯೆ ವಿವರಗಳು:**

1) ಇ–ಟೆಂಡರಿಗೆ ಸಂಬಂಧಿಸಿದ ವಿಚಾರಣೆ ಮತ್ತು ಸ್ಪಷ್ಟೀಕರಣಗಳಿಗೆ ಕೊನೆಯ ದಿನಾಂಕ ಮತ್ತು ವೇಳೆ: 11.02.2011ರ 17.00 ಗಂಟೆವರೆಗೆ
2) ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ದಿನಾಂಕ:10.02.2011 ರಿಂದ 17.02.2011ರ 16–00 ಗಂಟೆಯವರೆಗೆ ಪಡೆಯಬಹುದಾಗಿದೆ.
3) ಇ–ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಸ್ವೀಕರಿಸಲು ಕೊನೆ ದಿನಾಂಕ ಮತ್ತು ವೇಳೆ:17.02.2011 ರ 16–00 ಗಂಟೆಯವರೆಗೆ.
4) ತಾಂತ್ರಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ: 19.02.2011: 11–00 ಗಂಟೆಯವರೆಗೆ.
5) ಆರ್ಥಿಕ ಬಿಡ್ಡುಗಳನ್ನು ತೆರೆಯುವ ದಿನಾಂಕ ಮತ್ತು ವೇಳೆ: 23.02.2011: 11–00 ಗಂಟೆಯವರೆಗೆ.

ಲೋಕೋಪಯೋಗಿ ಇಲಾಖೆ ಮತ್ತು ಇ-ಟೆಂಡರಿಂಗ್‌ನಲ್ಲಿ ನೊಂದಾಯಿತ ಗುತ್ತಿಗೆದಾರರು ಇ–ಟೆಂಡರಿಂಗ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕಾರ್ಯಪಾಲಕ ಇಂಜಿನಿಯರ್, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು ಕರ್ನಾಟಕ ರಾಜ್ಯ ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಹಾಗೂ ವೆಬ್‌ಸೈಟ್ ಸಂ: www.eproc.karnataka.gov.in ರಲ್ಲಿ ಪಡೆಯಬಹುದಾಗಿದೆ. ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,
ಪಿ.ಆರ್.29 ಲೋಕೋಪಯೋಗಿ ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು.

## ಆಡಳಿತ ವೈದ್ಯಾಧಿಕಾರಿಗಳ ಕಛೇರಿ, ಸಾರ್ವಜನಿಕ ಆಸ್ಪತ್ರೆ, ತಿ.ನರಸೀಪುರ, ಮೈಸೂರು ಜಿಲ್ಲೆ

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಾಆತಿನ/ ಪಥ್ಯಾಹಾರ/31/2010–11, ದಿನಾಂಕ:3ನೇ ಜನವರಿ, 2011**

1) ಸಾರ್ವಜನಿಕ ಆಸ್ಪತ್ರೆ, ತಿ.ನರಸೀಪುರ ಮೈಸೂರು ಜಿಲ್ಲೆ ಇಲ್ಲಿಯ ಒಳರೋಗಿಗಳಿಗೆ ಪಥ್ಯಾಹಾರವನ್ನು ತಯಾರಿಸಿ 2011–12ನೇ ಸಾಲಿಗೆ ದಿನಾಂಕ:01.04.2011 ರಿಂದ 31.03.2012 ರವರೆಗೆ ಒದಗಿಸಲು ಅರಗಿನಿಂದ ಮೊಹರಾದ ಲಕೋಟೆಯಲ್ಲಿ ಇಚ್ಛೆಯುಳ್ಳ ಟೆಂಡರ್‌ದಾರರಿಂದ ನಿಬಂದನೆಗಳಿಗೆ ಅನುಸಾರವಾಗಿ ನಾಲ್ಕು ಪ್ರತಿಗಳಲ್ಲಿ ಟೆಂಡರ್ ಕರೆಯಲಾಗಿದೆ. ಮೊಹರಾದ ಲಕೋಟೆಯ ಮೇಲೆ ದಪ್ಪ ಅಕ್ಷಗಳಲ್ಲಿ ತಿ.ನರಸೀಪುರ ಆಸ್ಪತ್ರೆಯ ಒಳರೋಗಿಗಳಿಗೆ 2011–12ನೇ ಸಾಲಿಗೆ ಪಥ್ಯಾಹಾರವನ್ನು ಒದಗಿಸಲು ಟೆಂಡರ್ ಎಂದು ಬರೆಯತಕ್ಕದ್ದು.

2) 2011–12ನೇ ಸಾಲಿಗೆ ಆಸ್ಪತ್ರೆ ಒಳರೋಗಿಗಳ ಸಂಖ್ಯೆ ಅಂದಾಜು 21900 ಎಂದು ಭಾವಿಸಲಾಗಿದೆ. ಅದಕ್ಕೆ ಅನುಗುಣವಾಗಿ ಪಥ್ಯಾಹಾರದ ಟೆಂಡರ್‌ನ ಅಂದಾಜು ಮೊತ್ತ ರೂ.766500.

3) ನಿಗದಿತ ಫಾರಂಗಳನ್ನು ನಿಬಂಧನೆಗಳೊಡನೆ ಆಡಳಿತ ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ ತಿ.ನರಸೀಪುರ ಇವರ ಕಛೇರಿಯಲ್ಲಿ ಕೆಲಸದ ಸಮಯದಲ್ಲಿ ದಿನಾಂಕ:15.01.2011 ರಿಂದ 02.02.2011 ರಂದು ಮಧ್ಯಾಹ್ನ 3.00 ಗಂಟೆಯ ಒಳಗೆ ರೂ.200 ಗಳನ್ನು ನಗದಾಗಿ ಪಾವತಿಸಿ ಪಡೆಯಬಹುದಾಗಿದೆ. (ರಜಾ ದಿನಗಳನ್ನು ಹೊರತುಪಡಿಸಿ)

4) ಟೆಂಡರ್ ಜೊತೆ ಟೆಂಡರ್ ನಿಯಮಗಳಲ್ಲಿ ಸೂಚಿಸಿರುವ ಪ್ರಕಾರ ಇ.ಎಂ.ಡಿ. ಯನ್ನು ತಿ.ನರಸೀಪುರ ಖಜಾನೆಗೆ ಸಲ್ಲಿಸಿ (ಟ್ರೆಜರಿ) ಖಜಾನೆಯ ಮೂಲ ಚಲನ್ ಅನ್ನು ಸಲ್ಲಿಸತಕ್ಕದ್ದು.

5) ಟೆಂಡರ್ ಫಾರಂಗೆ ಲಗತ್ತಿಸಿರುವ ಪಟ್ಟಿಯಲ್ಲಿ ನಮೂದಿಸಿರುವ ಐಟಂಗಳನ್ನು ಆಸ್ಪತ್ರೆಯ ಅಡುಗೆ ಮನೆಯಲ್ಲಿ ಸ್ವಂತ ಖರ್ಚಿನಲ್ಲಿ ತಯಾರಿಸಿ, ಬ್ರೆಡ್ ಮತ್ತು ಹಾಲಿನ ಜೊತೆ ನಿಗದಿತ ವೇಳೆಯಲ್ಲಿ ಪ್ರತಿದಿನವೂ ಒದಗಿಸತಕ್ಕದ್ದು ಹಾಗೂ ಇದಕ್ಕೆ ತಗಲುವ ಅಡಿಗೆ ಅನಿಲ ಮತ್ತು ವಿದ್ಯುಚ್ಛಕ್ತಿ ಖರ್ಚನ್ನು ಟೆಂಡರ್‌ದಾರರೇ ಭರಿಸತಕ್ಕದ್ದು.

6) ಸ್ಪುಟವಾಗಿ ತಪ್ಪಿಲ್ಲದೆ ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಟೆಂಡರ್ ನಿಯಮದಲ್ಲಿ ಸೂಚಿಸಿರುವ ಅಡಕಗಳೊಂದಿಗೆ ದಿನಾಂಕ:11.02.2011ರ ಬೆಳಿಗ್ಗೆ 11.00 ಗಂಟೆಯೊಳಗಾಗಿ ಆಡಳಿತ ವೈದ್ಯಾಧಿಕಾರಿಗಳು ಸಾರ್ವಜನಿಕ ಆಸ್ಪತ್ರೆ ತಿ.ನರಸೀಪುರ ಇವರ ಕಛೇರಿಗೆ ಸಲ್ಲಿಸತಕ್ಕದ್ದು.

7) ನಿಬಂಧನೆಗಳಿಗೆ ಅನುಸಾರವಾಗಿಲ್ಲದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

8) ನಿಗದಿತ ಅವಧಿಯೊಳಗೆ ಬಾರದ ಟೆಂಡರ್‌ಗಳನ್ನು ಪರಿಗಣಿಸುವುದಿಲ್ಲ.

9) ದಿನಾಂಕ:11.02.2011ರಂದು ಮಧ್ಯಾಹ್ನ 12.00 ಗಂಟೆಗೆ ಬಂದಿರುವ ಟೆಂಡರ್‌ಗಳನ್ನು ಹಾಜರ್ ಆದ ಟೆಂಡರ್‌ದಾರರ ಸಮ್ಮುಖದಲ್ಲಿ ಆಡಳಿತ ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ತಿ.ನರಸೀಪುರ ಇವರಿಂದ ತೆರೆಯಲಾಗುವುದು.

10) ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರುರವರು ಹೊಂದಿರುತ್ತಾರೆ.

11) ಈ ಬಗ್ಗೆ ಹೆಚ್ಚಿನ ವಿವರಗಳಿಗೆ ಕಛೇರಿ ವೇಳೆಯಲ್ಲಿ ಆಡಳಿತ ವೈದ್ಯಾಧಿಕಾರಿಗಳು, ಸಾರ್ವಜನಿಕ ಆಸ್ಪತ್ರೆ, ತಿ.ನರಸೀಪುರ ಇವರನ್ನು ಸಂಪರ್ಕಿಸಬಹುದು.

ಆಡಳಿತ ವೈದ್ಯಾಧಿಕಾರಿಗಳು,
ಸರ್ಕಾರಿ ಸಾರ್ವಜನಿಕ ಆಸ್ಪತ್ರೆ,
ಟಿ.ನರಸೀಪುರ, ಮೈಸೂರು ಜಿಲ್ಲೆ.

ಪಿ.ಆರ್.26

## (ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ)

## ಜಂಟಿ ನಿರ್ದೇಶಕರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಯೆಯ್ಯಾಡಿ, ದ.ಕ. ಮಂಗಳೂರು

## ಟೆಂಡರ್–ಕಂ–ಹರಾಜು ಪ್ರಕಟಣೆ

**ಸಂಖ್ಯೆ:ದಕ/ಜಿಕೈಕೇ/ಅಧೀ/ನಿ.ವಾಹನ/10–11, ದಿನಾಂಕ:4ನೇ ಜನವರಿ, 2011**

**ವಿಷಯ:** ನಿರುಪಯುಕ್ತ ಅಂಬಾಸಿಡರ್ ಕಾರ್–ಟೆಂಡರ್–ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಸುತ್ತೋಲೆ ನಂ.ಸಿಆಸುಇ/63/ಶಿವಾನೀ/2009 ದಿನಾಂಕ:04.05.2009.

2) ಪ್ರಾದೇಶಿಕ ಸಾರಿಗೆ ಅಧಿಕಾರಿ ದ.ಕ. ಮಂಗಳೂರುರವರ ದೃಢೀಕರಣ ದಿನಾಂಕ:22.11.2010.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕಛೇರಿಯಲ್ಲಿರುವ ನಿರುಪಯುಕ್ತವಾದ 1985 ಮಾಡೆಲ್ ಅಂಬಾಸೀಡರ್ ಕಾರನ್ನು ಈ ಕೆಳಗೆ ವಿವರಿಸಿರುವಂತೆ, ಟೆಂಡರ್–ಕಂ–ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತರು ಈ ಟೆಂಡರ್–ಕಂ–ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಪಡೆದುಕೊಳ್ಳಬಹುದಾಗಿದೆ.

| ಕ್ರ. ಸಂ. | ಹರಾಜಿನ ವಿವರ | ಠೇವಣಿ ಹಣ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜು ನಡೆಸುವ ದಿನಾಂಕ & ವೇಳೆ | ಟೆಂಡರ್ ತೆರೆಯುವ ದಿನಾಂಕ & ವೇಳೆ |
|---|---|---|---|---|---|
| 1. | ಅಂಬಾಸೀಡರ್ ಕಾರ್ ನಂ. ಸಿಎಜಿ–8846 1985 ಮಾಡೆಲ್ | ರೂ.2000/– | 28.01.2011 12.ಗಂಟೆ ಮಧ್ಯಾಹ್ನ | 28.01.2011 12.30 ಗಂಟೆ ಮಧ್ಯಾಹ್ನ | 28.01.2011 1.00 ಗಂಟೆ ಮಧ್ಯಾಹ್ನ |

ಷರತ್ತು ಮತ್ತು ನಿಬಂಧನೆಗಳು ಹಾಗೂ ಹೆಚ್ಚಿನ ಮಾಹಿತಿಗಾಗಿ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸುವುದು:

ಜಂಟಿ ನಿರ್ದೇಶಕರು,
ಜಿಲ್ಲಾ ಕೈಗಾರಿಕಾ ಕೇಂದ್ರ
ದ.ಕ. ಮಂಗಳೂರು.

ಪಿ.ಆರ್.25

**ಮಹಾನಗರ ದಂಡಾಧಿಕಾರಿಗಳವರ ಸಂಚಾರಿ ನ್ಯಾಯಾಲಯ–3, ಬೆಂಗಳೂರು**

**ಸಂಕ್ಷಿಪ್ತ ಹರಾಜು ಇಸ್ತಿಹಾರ್**

**ಅಧಿಸೂಚನೆ ಸಂಖ್ಯೆ: 1/ 2011, ಬೆಂಗಳೂರು, ದಿನಾಂಕ:4ನೇ ಜನವರಿ, 2011**

ಈ ಮೂಲಕ ಸಮಸ್ತ ಜನಗಳಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ನಮೂದು ಮಾಡಿರುವ ಸ್ವತ್ತುಗಳ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಿ ಸದರಿ ಸ್ವತ್ತುಗಳು ತಮಗೆ ಸೇರುತ್ತವೆ ಎನ್ನುವ ದಾಖಲೆಗಳನ್ನು ಹಾಜರು ಪಡಿಸತಕ್ಕದ್ದು. ಒಂದು ವೇಳೆ ಈ ಅಧಿಸೂಚನೆ ಹೊರಡಿಸಿದ 30 ದಿನಗಳ ಒಳಗಾಗಿ ಯಾರೂ ಬರದೇ ಇದ್ದರೆ ಅವುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ದಿನಾಂಕ:23.02.2011, 24.02.2011, 25.02.2011, 26.02.2011 ರಂದು ಕ್ರಿಮಿನಲ್ ನ್ಯಾಯಾಲಯದ ಆವರಣದಲ್ಲಿ ಮಧ್ಯಾಹ್ನ 3.00 ಗಂಟೆಯಿಂದ ಸಂಜೆ 5.00 ಗಂಟೆ ವರೆಗೆ ಬಹಿರಂಗವಾಗಿ ಹರಾಜು ಮಾಡಲಾಗುವುದು.

1. ಹರಾಜು ಆಖೈರಾದ ಒಡನೆಯೆ ಪೂರ್ಣ ಮೊಬಲಗನ್ನು ಸ್ಥಳದಲ್ಲಿಯೇ ಪಾವತಿ ಮಾಡಿ ರಶೀದಿ ಪಡೆಯತಕ್ಕದ್ದು.
2. ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಈ ಕೆಳಗೆ ಸಹಿ ಮಾಡಿರುವವರಿಗೆ ಸೇರಿರುತ್ತದೆ.

| ಕ್ರಮ ಸಂಖ್ಯೆ | ಮುದ್ದೆ ಮಾಲು ಸಂಖ್ಯೆ | ಮೊಕದ್ದಮೆ ಸಂಖ್ಯೆ | ತೀರ್ಮಾನದ ದಿನಾಂಕ | ಮಾಲುಗಳ ವಿವರ |
|---|---|---|---|---|
| 1. | 72/03 | 25365/98 | 25.05.99 | 1. ಶಿವಲಿಕ್ ಸ್ಯೂಯಿಂಗ್ ಮೋಟಾರ್ಸ್<br>2. ಒಂದು ರೆಗ್ಯೂಲೇಟರ್ |
| 2. | 71/03 | 25364/98 | 17.03.00 | 1. ಒಂದು ಚಿಕ್ಕ ಶಿವಲಿಕ್ ಸ್ಯೂಯಿಂಗ್ ಮೋಟಾರ್ಸ್<br>2. ಒಂದು ಶಿವಲಿಕ್ ರೆಗ್ಯೂಲೇಟರ್<br>3. ಐದು ಶಿವಲಿಕ್ ಸ್ಯೂಯಿಂಗ್ ಮೋಟಾರ್ಸ್<br>4. ಶಿವಲಿಕ್ ರೆಗ್ಯೂಲೇಟರ್ |
| 3. | 57/02 | 6700/01 | 10.10.01 | ನಂಬರಿಲ್ಲದ ಒಂದು ಅಂಬಾಸಿಡರ್ ಕಾರು |
| 4. | 12/04 | 1607/2001 | 02.11.01 | 1. ಒಂದು ಸ್ವಿಸ್ಟ್ ವಾಚ್<br>2. ಒಂದು ಹೆಚ್ಎಂಟಿ ಶಕ್ತಿ ವಾಚ್<br>3. ಹೆಚ್ಎಂಟಿ ಲಲಿತ್ ವಾಚ್ |
| 5. | 41/03 | 3815/2001 | 22.11.01 | 1. ಒಂದು ಸುಜುಕಿ ಸಮುರಾಯಿ ಮೊ.ಸೈಕಲ್ ಸಂಖ್ಯೆ ಕೆಎ 04 ಆರ್ 2378 |
| 6. | 45/02 | 5424/02 | 08.05.02 | ಒಂದು ಯಮಹಾ ಆರ್ಎಕ್ಸ್ ನಂ.ಸಿಕೆಡಬ್ಲ್ಯೂ 9511 |
| 7. | 125/02 | 12258/02 | 18.10.02 | ಒಂದು ಬೀರು |
| 8. | 19/04 | 14123/02 | 06.01.03 | ಒಂದು ಸುಜುಕಿ ಮೋಟಾರ್ ಸೈಕಲ್ |
| 9. | 20/04 | 10298/2002 | 11.03.03 | 1. ಒಂದು ಲೇಡೀಸ್ ವಾಚ್<br>2. ಒಂದು ಏರಿಯಂಟಲ್ ವಾಚ್<br>3. ಒಂದು ಟೈಟಾನ್ ವಾಚ್<br>4. ಒಂದು ಕ್ಲಾಸಿಕ್ ಗೋಲ್ಡ್ ಕೇಸ್ ವಾಚ್ |
| 10. | 55/03 | 1088/2003 | 18.07.03 | 1. ನಂಬರಿಲ್ಲದ ಟಿ.ವಿ.ಎಸ್. ಎಕ್ಸಲ್ ಚಾಸಿಸ್ ನಂ.ಪಿ. 110 4 ಎಫ್ 430158 |

| ಕ್ರಮ ಸಂಖ್ಯೆ | ಮುದ್ದೆ ಮಾಲು ಸಂಖ್ಯೆ | ಮೊಕದ್ದಮೆ ಸಂಖ್ಯೆ | ತೀರ್ಮಾನದ ದಿನಾಂಕ | ಮಾಲುಗಳ ವಿವರ |
|---|---|---|---|---|
| 11. | 69/03 | 7369/03 | 02.12.03 | ಯುರೋಟೆಕ್ ಮೊಬೈಲ್ ಫೋನ್ |
| 12. | 83/04 | 5694/04 | 20.12.04 | 1. ಒಂದು ರಿಲೆಯನ್ಸ್ ಮೊಬೈಲ್<br>2. ಒಂದು ಕ್ಯಾಲ್‌ಕ್ಯೂಲೇಟರ್ |
| 13. | 5/05 | 226/05 | 18.01.05 | ಒಂದು ಒನಿಡಾ ಪೊರ್ಟಬಲ್ ಕಲರ್ ಟಿವಿ |
| 14. | 8/05 | 288/05 | 24.01.05 | 8 ಮೊಬೈಲ್ ಪೋನ್‌ಗಳು |
| 15. | 23/05 | 880/05 | 01.03.05 | 1. ಒಂದು ರಿಲಯನ್ಸ್ ಮೊಬೈಲ್<br>2. ಒಂದು ನೋಕಿಯಾ ಮೊಬೈಲ್ |
| 16. | 28/05 | 987/05 | 07.03.05 | ಒಂದು ನೊಕಿಯಾ ಮೊಬೈಲ್ ಪೋನ್ |
| 17. | 30/05 | 1084/05 | 14.03.05 | ಒಂದು ಮೊಬೈಲ್ ಪೋನ್ |
| 18. | 35/05 | 1182/05 | 17.03.05 | 1. 2 ನೊಕಿಯಾ ಮೊಬೈಲ್ ಪೋನ್‌ಗಳು<br>2. ಕ್ಯಾಲಕ್ಯೂಲೇಟರ್<br>3. ಲ್ಯಾಂಡ್ ಪೋನ್ |
| 19. | 43/05 | 346/2005 | 26.03.05 | 1. ನೋಕಿಯಾ ಮೊಬೈಲ್ ಪೋನ್ |
| 20. | 55/05 | 1871/2005 | 26.04.05 | 1. ನೋಕಿಯಾ ಮೊಬೈಲ್ ಪೋನ್<br>2. ಒಂದು ಕ್ಯಾಲ್‌ಕ್ಯೂಲೇಟರ್ |
| 21. | 69/05 | 3693/05 | 16.08.05 | 1. ಸ್ಯಾಮ್‌ಸಂಗ್ ರಿಲೆಯನ್ಸ್ ಮೊಬೈಲ್ ಪೋನ್<br>2. ನೋಕಿಯಾ ಮೊಬೈಲ್ ಪೋನ್<br>3. ನೋಕಿಯಾ ಮೊಬೈಲ್ ಪೋನ್<br>4. ನೋಕಿಯಾ ಮೊಬೈಲ್ ಪೋನ್<br>5. ಕ್ಯೂ ಅಂಡ್ ಕ್ಯೂ ಕ್ವಾರ್ಟಜ್ ಪ್ಲಾಸ್ಟೀಕ್ ವಾಚ್ |
| 22. | 38/05 | 1247/05 | 03.09.05 | 1. ಒಂದು ಮೊಬೈಲ್ |
| 23. | 72/05 | 3869/2005 | 03.09.05 | 1. ಆರು ಮೊಬೈಲ್ ಹ್ಯಾಂಡ್ ಸೆಟ್ |
| 24. | 73/05 | 3896/2005 | 06.09.05 | 1. ಒಂದು ಎಲ್‌ಜಿ ರಿಲೆಯನ್ಸ್ ಮೊಬೈಲ್<br>2. ನೋಕಿಯಾ ಮೊಬೈಲ್<br>3. ನೋಕಿಯಾ ಮೊಬೈಲ್<br>4. ನೋಕಿಯಾ ಮೊಬೈಲ್ |
| 25. | 74/05 | 4051/2005 | 17.09.05 | 1. ಒಂದು ವಿಡಿಯೋಕಾನ್ ಪೋರ್ಟಬಲ್ ಕಲರ್ ಟಿವಿ |
| 26. | 75/05 | 4260/05 | 04.10.05 | 1. ಒಂದು ಕ್ರೌನ್ ಪೊರ್ಟಬಲ್ ಕಲರ್ ಟಿವಿ<br>2. ಒಂದು ಡಿವಿಡಿ (ಡಿಸ್‌ಪ್ಲೇಯರ್)<br>3. ಮೂರು ಮೊಬೈಲ್ ಪೋನ್‌ಗಳು–ನೋಕಿಯಾ ಬಿ.<br>4. ಒಂದು ಲ್ಯಾಂಡ್ ಲೈನ್ ಪೋನ್ ಸೆಟ್ (ರಿಲೈಯನ್ಸ್) |
| 27. | 77/05 | 4351/05 | 10.10.05 | 1. ಒಂದು ಟೈಟೆಕ್ ಗಡಿಯಾರ<br>2. ಒಂದು ಟೆಲೆಕ್ಸ್ ಗಡಿಯಾರ<br>3. ಒಂದು ಸಿಟಿಜನ್ ಗಡಿಯಾರ |
| 28. | 13/06 | 644/06 | 17.02.06 | 1. ಒಂದು ರಿಲೆಯನ್ಸ್ ಮೊಬೈಲ್ |

| ಕ್ರಮ ಸಂಖ್ಯೆ | ಮುದ್ದೆ ಮಾಲು ಸಂಖ್ಯೆ | ಮೊಕದ್ದಮೆ ಸಂಖ್ಯೆ | ತೀರ್ಮಾನದ ದಿನಾಂಕ | ಮಾಲುಗಳ ವಿವರ |
|---|---|---|---|---|
| 29. | 19/06 | 4885/03 | 15.03.06 | 1. 5 ಕೇರಂ ಬೋರ್ಡ್<br>2. ಎರಡು ಮೊಬೈಲ್ ಪೋನ್‌ಗಳು<br>3. ಹತ್ತು ಕುರ್ಚಿಗಳು (ಸ್ಟೂಲ್ ತರಹದ್ದು) |
| 30. | 20/06 | 4886/03 | 15.03.06 | 1. 5 ಕೇರಮ್ ಬೋರ್ಡ್‌ಗಳು<br>2. ಹತ್ತು ಕುರ್ಚಿಗಳು (ಸ್ಟೂಲ್ ತರಹದ್ದು) |
| 31. | 63/06 | 4061/06 | 25.10.06 | 1. ಮೂರು ನೋಕಿಯಾ ಮೊಬೈಲ್‌ಗಳು<br>2. ಒಂದು ಸೋನಿ ಎರಿಕ್‌ಸನ್ ಮೊಬೈಲ್<br>3. ಒಂದು ಸ್ಯಾಮ್‌ಸಂಗ್ ಮೊಬೈಲ್ |
| 32. | 57/07 | 2303/07 | 19.07.07 | 1. ಒಂದು ಕ್ಲಾಸಿಕ್ ಮೊಬೈಲ್ |
| 33. | 74/07 | 4588/06 | 12.08.07 | 1. 4 ನೋಕಿಯಾ ಮೊಬೈಲ್‌ಗಳು ಮತ್ತು ಒಂದು ಸೋನಿ ಎರಿಕ್‌ಸನ್ ಮೊಬೈಲ್ |
| 34. | 67/07 | 2891/07 | 30.08.07 | 1. 5 ಮೊಬೈಲ್‌ಗಳು |
| 35. | 71/07 | 2877/07 | 10.09.07 | 1. 3 ಮೊಬೈಲ್ ಪೋನ್‌ಗಳು (ನೋಕಿಯಾ) |
| 36. | 78/07 | 2890/07 | 06.10.07 | 8 ಮೊಬೈಲ್ ಪೋನುಗಳು |
| 37. | 84/07 | 3058/07 | 31.10.07 | 1. ಒಂದು ನೋಕಿಯಾ ಮೊಬೈಲ್ ಪೋನ್<br>2. ಒಂದು ಸ್ಯಾಮ್‌ಸಂಗ್ ರಿಲೆಯನ್ಸ್ ಮೊಬೈಲ್ ಪೋನ್ |
| 38. | 90/07 | 2960/07 | 06.11.07 | 1. ಒಂದು ರಿಲೆಯನ್ಸ್ ಕ್ಲಾಸಿಕ್ ಮೊಬೈಲ್<br>2. ಒಂದು ಟೈಟನ್ ಹಳೆಯ ವಾಚು |
| 39. | 101/07 | 3607/07 | 05.12.07 | 1. ಒಂದು ನೋಕಿಯಾ ಮೊಬೈಲ್<br>2. ಒಂದು ಸೋನಿ ಎರಿಕ್‌ಸನ್ ಮೊಬೈಲ್ |
| 40. | 6/08 | 73/08 | 08.02.08 | 1. ಒಂದು ಕ್ಲಾಸಿಕ್ ಮೊಬೈಲ್ |
| 41. | 28/08 | 2396/08 | 20.09.08 | 10 ಮೊಬೈಲ್ ಪೋನ್ ಸೆಟ್‌ಗಳು |
| 42. | 56/05 | 4146/04 | 04.11.08 | 1. ಒಂದು ನೋಕಿಯಾ ಮೊಬೈಲ್<br>2. ಒಂದು ಮೊಟರಾಲಾ ಮೊಬೈಲ್<br>3, ಒಂದು ನೋಕಿಯಾ ಮೊಬೈಲ್<br>4. ಒಂದು ಮೊಟರಾಲಾ ಮೊಬೈಲ್<br>5. ಒಂದು ಮೊಟರಾಲಾ ಮೊಬೈಲ್<br>6. ಒಂದು ರಿಲೆಯನ್ಸ್ ಮೊಬೈಲ್ |
| 43. | 20/08 | 804/08 | 16.04.09 | 14 ಮೊಬೈಲ್ ಪೋನ್ ಸೆಟ್‌ಗಳು |
| 44. | 35/08 | 1995/06 | 16.05.09 | 1. ಒಂದು ಅಮೆಜಾನ್ ಕಂಪನಿಯ ಟೇಪರೇಕಾರ್ಡರ್ |
| 45. | 9/04 | 3827/03 | 31.12.09 | 1. ಒಂದು ಪ್ರಾಮಿಸ್ ಕ್ವಾಟ್ಜ್ ಎಂಬ ಹೆಸರಿನ ಕಪ್ಪು ಡಯಲ್‌ನ ಗೋಲ್ಡ್ ಕಲರ್ ಚಿಕ್ಕ ಗಡಿಯಾರ<br>2. ಒಂದು ಬ್ಲೂ ಕಲರ್ ಅಲಾರಂ ಗಡಿಯಾರ<br>3. ಒಂದು ಕುಂಕುಮ ಬಣ್ಣದ ಜರಿ ಬಾರ್ಡರ್ ರೇಷ್ಮೆ ಸೀರೆ<br>4. ಒಂದು ತಿಳಿಹಸಿರು ಬಣ್ಣದ ಹಳೆಯ ರೇಷ್ಮೆ ಸೀರೆ<br>5. ಒಂದು ಬ್ರೌನ್ ಕಲರ್ ಹಳೆಯ ಸೀರೆ<br>6. ಒಂದು ಅರಿಶಿಣ ಬಣ್ಣದ ಜರಿ ಬಾರ್ಡರ್ ಹಳೇ ರೇಷ್ಮೆ ಸೀರೆ |

| ಕ್ರಮ ಸಂಖ್ಯೆ | ಮುದ್ದೆ ಮಾಲು ಸಂಖ್ಯೆ | ಮೊಕದ್ದಮೆ ಸಂಖ್ಯೆ | ತೀರ್ಮಾನದ ದಿನಾಂಕ | ಮಾಲುಗಳ ವಿವರ |
|---|---|---|---|---|
| | | | | 7. ಒಂದು ಗಿಳಿಹಸಿರು ಬಣ್ಣದ ಹಳೆಯ ರೇಷ್ಮೆ ಸೀರೆ<br>8. ಒಂದು ಬ್ಲೂಕಲರ್ ಜರಿಬಾರ್ಡರ್ ಇರುವ ಚೆಕ್ಸ್ ರೇಷ್ಮೆ ಸೀರೆ<br>9. ಒಂದು ಸ್ಯಾನ್ಯೊ ಎಂಬ ಹೆಸರಿನ 3 ಬ್ಯಾಂಡ್ ರೇಡಿಯೋ ಕ್ಯಾಸೆಟ್ ರೆಕಾರ್ಡರ್<br>10. ಒಂದು ಯಾಶಿಕಾ ಜೆಮಿನಿ ಸೂಪರ್ ಎಂಬ ಹೆಸರಿನ ಕ್ಯಾಮೆರಾ<br>11. ಒಂದು ಫಿಲಿಪ್ಸ್ ಹೆಸರಿನ ಇಸ್ತ್ರಿಪೆಟ್ಟಿಗೆ<br>12. ಒಂದು ಮಿನೋಟಾ ಎಂಬ ಹೆಸರಿನ ಕ್ಯಾಮೆರಾ<br>13. ಒಂದು ಮಿನೋಟಾ ಎಂಬ ಹೆಸರಿನ ಕ್ಯಾಮೆರಾ<br>14. ಒಂದು ಪ್ಯಾನಸೋಕ್ ಹೆಸರಿನ ಕ್ಯಾಸೆಟ್ ಪ್ಲೇಯರ್ |
| 46. | 26/08 | 862/04 | 22.12.09 | 1. ಒಂದು ಸೀಗೇಟ್ ಎಂಬ ಹೆಸರಿನ ಕಂಪ್ಯೂಟರ್ ಹಾರ್ಡ್ ಡಿಸ್ಕ್<br>2. ಒಂದು ಸೀಗೇಟ್ ಎಂಬ ಹೆಸರಿನ ಕಂಪ್ಯೂಟರ್ ಹಾರ್ಡ್ ಡಿಸ್ಕ್<br>3. ಒಂದು ಸೀಗೇಟ್ ಎಂಬ ಹೆಸರಿನ ಕಂಪ್ಯೂಟರ್ ಹಾರ್ಡ್ ಡಿಸ್ಕ್<br>4. ಒಂದು ಸೀಗೇಟ್ ಎಂಬ ಹೆಸರಿನ ಕಂಪ್ಯೂಟರ್ ಹಾರ್ಡ್ ಡಿಸ್ಕ್<br>5. ಒಂದು ಸೀಗೇಟ್ ಎಂಬ ಹೆಸರಿನ ಕಂಪ್ಯೂಟರ್ ಹಾರ್ಡ್ ಡಿಸ್ಕ್<br>6. ಒಂದು ಕಂಪ್ಯೂಟರ್ ಹಾರ್ಡ್ ಡಿಸ್ಕ್ |
| 47. | 6/07 | 2562/05 | 07.12.09 | 1. ಒಂದು ಪ್ಯಾನಸೋನಿಕ್ ಚಿಕ್ಕ ಟೇಪರೆಕಾರ್ಡರ್<br>2. 2 ಸ್ಪೀಕರ್ಸ್ (ಸ್ಟೀರಿಯೋಪೋನಿಕ್)<br>3. 2 ರೆಡ್ ಹಾರ್ನ್ |
| 48. | 18/09 | 4973/05 | 15.12.09 | 1. ಒಂದು ವಿಸಿಡಿ ಪ್ಲೇಯರ್ ಪಗಾರಿಯಾ<br>2. ಒಂದು ಸ್ಯಾಂಸಂಗ್ ಮೊಬೈಲ್<br>3. ಒಂದು ನೋಕಿಯಾ ಮೊಬೈಲ್<br>4. ಒಂದು ಸ್ಟೀಲ್ ಕೇಸ್ ವಾಚ್ |
| 49. | 2/10 | 5320/09 | 28.01.10 | 1. ಎಂಟು ಮೊಬೈಲ್ ಪೋನ್ |
| 50. | 3/10 | 5056/05 | 28.01.10 | 1. ನೋಕಿಯಾ ಮೊಬೈಲ್ |
| 51. | 6/10 | 5167/09 | 29.01.10 | 1. ಒಂದು ನೊಕಿಯಾ ಮೊಬೈಲ್ ಹ್ಯಾಂಡ್ ಸೆಟ್ |
| 52. | 12/09 | 3576/07 | 15.02.10 | 1. ಒಂದು ರೌಂಡ್ ಟೇಬಲ್<br>2. ಹನ್ನೆರಡು ಪ್ಲಾಸ್ಟಿಕ್ ಚೇರ್ಸ್<br>3. ಒಂದು ಸ್ಟ್ಯಾಂಡಿಂಗ್ ಫ್ಯಾನ್ |
| 53. | 15/10 | 176/10 | 29.04.10 | 1. ಒಂದು ನೋಕಿಯಾ ಮೊಬೈಲ್ |

ಮಹಾನಗರ ದಂಡಾಧಿಕಾರಿ,

ಪಿ.ಆರ್.22

ಸಂಚಾರ ನ್ಯಾಯಾಲಯ–3, ಬೆಂಗಳೂರು.

## ತಾಂತ್ರಿಕ ಶಿಕ್ಷಣ ಇಲಾಖೆ

## ಪ್ರಾಚಾರ್ಯರವರ ಕಾರ್ಯಾಲಯ, ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್, ಭದ್ರಾವತಿ

## ಟೆಂಡರ್ ಪ್ರಕಟಣೆ

**ನಂ. ವಿಸಪಾಭ/142/ರಿ/2004-05, ದಿನಾಂಕ:3ನೇ ಜನವರಿ, 2011**

**ವಿಷಯ:** ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್ ಆವರಣದಲ್ಲಿರುವ ತೆಂಗಿನ ಮರದ ಬಲಿತ ಕಾಯಿಗಳನ್ನು ಟೆಂಡರ್ ಮೂಲಕ ವಿಲೇವಾರಿ ಮಾಡುವ ಬಗ್ಗೆ ಪ್ರಕಟಣೆ

ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್ ಆವರಣದಲ್ಲಿರುವ 50 ತೆಂಗಿನ ಮರಗಳಿಂದ ಬಲಿತ ತೆಂಗಿನ ಕಾಯಿಗಳನ್ನು ಕೊಯ್ದು ಕೊಳ್ಳಲು ಮತ್ತು ತೆಂಗಿನ ಗರಿ ಇತ್ಯಾದಿಗಳನ್ನು ಒಯ್ಯಲು ಎರಡು ವರ್ಷಗಳವರೆಗೆ ಪಡೆಯಲು ಮೊಹರಾದ ಟೆಂಡರ್ ದರವನ್ನು ದಿನಾಂಕ:28.02.2011 ರ ಒಳಗೆ ಮಧ್ಯಾಹ್ನ 4.00 ಗಂಟೆಯ ಒಳಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸಲ್ಲಿಸಲು ತಿಳಿಸಲಾಗಿದೆ.

1) ಟೆಂಡರ್‌ನಲ್ಲಿ ಭಾಗವಹಿಸುವವರು ರೂ.500-00 ಪ್ರಾರಂಭಿಕ ಠೇವಣಿ ಹಣ ನೀಡಬೇಕು. ಈ ಹಣ ಟೆಂಡರ್ ಮುಗಿದ ನಂತರ ಹಿಂದಿರುಗಿಸಲಾಗುವುದು.
2) ಟೆಂಡರ್ ಮೊತ್ತ ನಿಗದಿತ ಮೊತ್ತಕ್ಕಿಂತ ಕಡಿಮೆ ಆದಲ್ಲಿ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರ ಪ್ರಾಚಾರ್ಯರವರಿಗೆ ಇರುತ್ತದೆ.
3) ಎರಡು ವರ್ಷದ ಗುತ್ತಿಗೆಗೂ ಒಟ್ಟು ಮೊತ್ತವನ್ನು ಟೆಂಡರ್ ತೆರೆದ 3 ದಿನಗಳಲ್ಲಿ ಕಟ್ಟಬೇಕು. ಇಲ್ಲದಿದ್ದಲ್ಲಿ ಟೆಂಡರ್ ರದ್ದಾಗುತ್ತದೆ. ಅದನ್ನು ಪ್ರಾಚಾರ್ಯರು ಸೂಕ್ತ ರೀತಿ ಮುಂದಿನ ಕ್ರಮ ಕೈಗೊಳ್ಳುವರು. ಹಾಗೂ ಪ್ರಾರಂಭಿಕ ಠೇವಣಿ ಮುಟ್ಟುಗೋಲು ಹಾಕಲಾಗುವುದು.
4) ವಿಜೇತ ಟೆಂಡರ್‌ದಾರರು ಅವಧಿ ಆದೇಶ ನೀಡಿದ ದಿನಾಂಕದಿಂದ 2 ವರ್ಷ ಚಾಲ್ತಿಯಲ್ಲಿರುತ್ತದೆ ಈ ಅವಧಿಯಲ್ಲಿ ಎಳೆನೀರು ಕೀಳಲು ಅವಕಾಶವಿಲ್ಲ. ತೆಂಗಿನ ಗಿಡಗಳಿಗೆ ಉತ್ತಮ ಫಸಲು ನೀಡಲು ಗೊಬ್ಬರ, ಪಾತಿ ಮಾಡುವುದು, ನೀರು ಹಾಕುವುದು ಅವರದೇ ಜವಾಬ್ದಾರಿಯಾಗಿರುತ್ತದೆ.
5) ತೆಂಗಿನ ಗಿಡಗಳ ಕಾಯಿ ಕೀಳದಂತೆ ನೋಡಿಕೊಳ್ಳುವ ಉಸ್ತುವಾರಿ ಯಶಸ್ವಿ ಹರಾಜುದಾರರದ್ದೇ ಆಗಿರುತ್ತದೆ.
6) ತೆಂಗಿನ ಗಿಡಗಳಿಗೆ ನೀರು, ಗೊಬ್ಬರ ಮತ್ತು ಇತ್ಯಾದಿ ಕಾಲ ಕಾಲಕ್ಕೆ ಹಾಕತಕ್ಕದ್ದು.
7) ಯಾವುದೇ ವಿವಾದಾತ್ಮಕ ಅಂಶಗಳಿಗೆ ಪ್ರಾಚಾರ್ಯರ ತೀರ್ಮಾನವೇ ಅಂತಿಮ.

ಪ್ರಾಚಾರ್ಯರು,
ವಿ ಐ ಎಸ್ ಎಸ್ ಜೆ ಸರ್ಕಾರಿ
ಪಾಲಿಟೆಕ್ನಿಕ್, ಭದ್ರಾವತಿ-577 301

ಪಿ.ಆರ್.4

## ಉದ್ಯೋಗ ಮತ್ತು ತರಬೇತಿ ಇಲಾಖೆ

## ಪ್ರಾಚಾರ್ಯರ ಕಛೇರಿ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22

## ಪ್ರಕಟಣೆ

**ಸಂಖ್ಯೆ: ಕೈತಸಂ/ತರಬೇತಿ/ಬೆ-22/ಕಟ್ಟಡ/ಉಪಹಾರಗೃಹ/2010-11, ದಿನಾಂಕ:17ನೇ ಜನವರಿ, 2011**

**ವಿಷಯ:** ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22 ಇಲ್ಲಿನ ಸಸ್ಯಾಹಾರಿ ಉಪಹಾರ ಮಂದಿರ (ಕ್ಯಾಂಟೀನ್) ನನ್ನು ಬಾಡಿಗೆ ಆಧಾರದ ಮೇಲೆ ನೀಡುವ ಬಗ್ಗೆ.

ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ರಸ್ತೆ, ಬೆಂಗಳೂರು-22 ಇಲ್ಲಿನ ಸಸ್ಯಹಾರಿ ಉಪಹಾರ ಮಂದಿರದ (ಕ್ಯಾಂಟೀನ್)ನನ್ನು ಮಾಸಿಕ ಬಾಡಿಗೆ ಆಧಾರದ ಮೇಲೆ ಟೆಂಡರ್‌ನ ನಿಬಂಧನೆಗೊಳಪಟ್ಟು ನಡೆಸಲು ಅನುಭವ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಟೆಂಡರ್ ಫಾರಂ ಮತ್ತು ನಿಬಂಧನೆಗಳನ್ನು ರೂ.50/- ನಗದು ಪಾವತಿಸಲು ದಿನಾಂಕ:18.01.2011 ರಿಂದ ಸದರಿ ಸಂಸ್ಥೆಯ ಎಲ್ಲಾ ಕೆಲಸದ ದಿನಗಳಲ್ಲಿ ಪಡೆಯಬಹುದಾಗಿದೆ. ತುಂಬಿದ ಅರ್ಜಿ ಜೊತೆಯಲ್ಲಿ ಇ.ಎಂ.ಡಿ. ಮೊತ್ತ ರೂ.500/-ನ ಡಿ.ಡಿ.ಯೊಂದಿಗೆ ದಿನಾಂಕ:28.02.2011ರ ಸಂಜೆ 3.00 ಗಂಟೆಯೊಳಗೆ ಸಲ್ಲಿಸಬೇಕು.

ಟೆಂಡರ್ ಲಕೋಟೆಯನ್ನು ದಿನಾಂಕ:28.02.2011 ರಂದು ಸಂಜೆ 3.15ಕ್ಕೆ ತೆರೆಯಲಾಗುವುದು. ಈ ಸಮಯದಲ್ಲೂ ಟೆಂಡರ್‌ದಾರರು ಭಾಗವಹಿಸಬಹುದಾಗಿದೆ. ಈ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಪ್ರಾಚಾರ್ಯರನ್ನು ಸಂಪರ್ಕಿಸಬಹುದಾಗಿದೆ.

ಪ್ರಾಚಾರ್ಯರು,
ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ,
ತುಮಕೂರು ರಸ್ತೆ, ಬೆಂಗಳೂರು.

ಪಿ.ಆರ್.34

## ಕರ್ನಾಟಕ ಸರ್ಕಾರದ ನಡವಳಿಗಳು

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

**ಆದೇಶ ಸಂಖ್ಯೆ: ಪಸಂಮೀ 167 ಪಸಸೇ 2008, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2010**

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಯೋಜನೇತರ ಲೆಕ್ಕಶೀರ್ಷಿಕೆ ಅಡಿಯಲ್ಲಿನ ಹಂಗಾಮಿ ಹುದ್ದೆಗಳನ್ನು ಖಾಯಂಗೊಳಿಸಲು ಅನುಮೋದನೆ ನೀಡುವಿಕೆ.

**ಓದಲಾಗಿದೆ:–** (1) ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–1/ವಿವ(ಅ)/ಭಾಗ–1/ 2007–08, ದಿನಾಂಕ: 31–03–2009.

(2) ಪತ್ರ ಸಂಖ್ಯೆ:ಆಪಸಂ/ಸಿಬ್ಬಂದಿ–1(ಅ)/ವಿವ–2/2006–07/ 2009–10, ದಿನಾಂಕ: 03–03–2010.

(3) ಪತ್ರ ಸಂಖ್ಯೆ: ಆಪಸಂ/ಸಿಬ್ಬಂದಿ–1(ಅ)/ವಿವ–1/07–08, ದಿನಾಂಕ: 04–06–2010 ಮತ್ತು 26–11–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) (2) ಮತ್ತು (3)ರ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಇಲಾಖೆಯಲ್ಲಿನ 10 ಯೋಜನೆಗಳಡಿಯಲ್ಲಿ 30 ವರ್ಷಗಳಿಂದ ಒಟ್ಟು 1004 ಹಂಗಾಮಿ ಹುದ್ದೆಗಳು ಮಂಜೂರಾಗಿದ್ದು, ಈ ಹುದ್ದೆಗಳು ಕಾಲಕಾಲಕ್ಕೆ ಮುಂದುವರೆಯುತ್ತಾ ಬಂದಿದೆ ಎಂದು ತಿಳಿಸಿರುತ್ತಾರೆ. ಸದರಿ 1004 ಹುದ್ದೆಗಳಲ್ಲಿ 111 ಹುದ್ದೆಗಳು ಕೇಂದ್ರ ಕಛೇರಿಯಲ್ಲಿದ್ದು ಅವುಗಳ ಮೂಲಕ ರಾಜ್ಯ, ಕೇಂದ್ರ ಹಾಗೂ ರಾಜ್ಯ ಪುರಸ್ಕೃತ ವಿವಿಧ ಯೋಜನೆಗಳ ಮೇಲ್ವಿಚಾರಣೆ, ರಾಜ್ಯ ವಲಯದ ಬಿಲ್ಲುಗಳ ಇತ್ಯರ್ಥ, ತಾಂತ್ರಿಕ ವಿಷಯಗಳ ಬಗ್ಗೆ ಸರ್ಕಾರದೊಂದಿಗೆ ಪತ್ರ ವ್ಯವಹಾರ, 12 ಪ್ರಮುಖ ಜಾನುವಾರು ಕ್ಷೇತ್ರಗಳ ಮೇಲುಸ್ತುವಾರಿ ಇವೇ ಮುಂತಾದ ಕೆಲಸಗಳನ್ನು ನಿರ್ವಹಿಸಲಾಗುತ್ತಿದ್ದು, 52 ಹುದ್ದೆಗಳ ಮೂಲಕ ಸಾಂಖ್ಯಿಕ ಸಂಗ್ರಹ ಮತ್ತು ಅಂಕಿ ಅಂಶಗಳ ಕಾರ್ಯನಿರ್ವಹಣೆ, ಜಾನುವಾರು ಗಣತಿ ವಾರ್ಷಿಕ ವರದಿ ತಯಾರಿಕೆ, ಪ್ರಗತಿ ವರದಿ, ಇಲಾಖಾ ವಿಷಯಗಳನ್ನು ವೆಬ್‌ಸೈಟಿನಲ್ಲಿ ಅಳವಡಿಸುವ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದ್ದು, ಉಳಿದ ಹುದ್ದೆಗಳು ಜಾನುವಾರು ಕ್ಷೇತ್ರಗಳಲ್ಲಿನ ಹುದ್ದೆಗಳಾಗಿದ್ದು ಆ ಹುದ್ದೆಗಳಿಂದ ರಾಜ್ಯ ವಲಯದ ಕಾರ್ಯಕ್ರಮಗಳಾದ ಉತ್ತಮ ದೇಶೀಯ, ವಿದೇಶೀಯ ಮಿಶ್ರ ತಳಿಗಳ ವೀರ್ಯಗಳನ್ನು ಸಂಸ್ಕರಿಸಲು ಹಾಗೂ ರೈತರ ರಾಸು / ಕೃತಕ ಗರ್ಭಧಾರಣೆಗೆ ಬೇಕಾದ ವೀರ್ಯ ಉತ್ಪಾದನೆ, ತಳಿ ಸಂರಕ್ಷಣೆ, ವೀರ್ಯ ನಳಿಕೆಗಳ ಸರಬರಾಜು, ಮೇವು ಅಭಿವೃದ್ಧಿ, ಹೈನುಗಾರಿಕೆ ಶಿಕ್ಷಣಾರ್ಥಿಗಳಿಗೆ ಮತ್ತು ರೈತರಿಗೆ ತರಬೇತಿ, ಹಂದಿ ಮತ್ತು ಕುಕ್ಕುಟ ತಳಿ ಸಂವರ್ಧನೆ ಮುಂತಾದ ಚಟುವಟಿಕೆಗಳನ್ನು ನಿರ್ವಹಿಸಲಾಗುತ್ತಿದೆ ಎಂದು ತಿಳಿಸಿರುತ್ತಾರೆ. ಮೇವು ಬೆಳೆಗಳ ಮಿನಿಕಿಟ್ ಉತ್ಪಾದನೆ ಹಾಗೂ ಸುಧಾರಿತ ತಳಿಗಳ ಹುಲ್ಲಿನ ಬೇರುಗಳನ್ನು, ಬೀಜಗಳನ್ನು ರೈತರಿಗೆ ಸರಬರಾಜು ಮಾಡುವುದು, ಪ್ರಾತ್ಯಕ್ಷಿಕೆಯನ್ನು ಪ್ರದರ್ಶಿಸುವುದು, ಇಲಾಖಾ ಅಧಿಕಾರಿ / ಸಿಬ್ಬಂದಿಯವರಿಗೆ ಪುನಶ್ಚೇತನ ತರಬೇತಿ ಮುಂತಾದ ಕಾರ್ಯಕ್ರಮಗಳಿಗೆ ಹೊಸದಾಗಿ ನೇಮಕಗೊಂಡ ಪಶುವೈದ್ಯಕೀಯ ಪರೀಕ್ಷಕರಿಗೆ ತರಬೇತಿ ನೀಡುವ ಕಾರ್ಯಕ್ರಮಗಳನ್ನು ನಿರ್ವಹಿಸಲಾಗುತ್ತಿರುವುದರಿಂದ ಸದರಿ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಹಂಗಾಮಿ ಹುದ್ದೆಗಳ ಅವಶ್ಯಕತೆಯಿರುತ್ತದೆ ಎಂದು ತಿಳಿಸಿರುತ್ತಾರೆ.

1004 ಹಂಗಾಮಿ ಹುದ್ದೆಗಳ ಪೈಕಿ 118 ಹುದ್ದೆಗಳು ಖಾಲಿ ಇದ್ದು, ಈ ಹುದ್ದೆಗಳು ನಿವೃತ್ತಿ / ವರ್ಗಾವಣೆ / ಮುಂಬಡ್ತಿಗಳಿಂದ ಖಾಲಿಯಾಗಿರುತ್ತದೆಂದು ಮತ್ತು 2010–11ನೇ ಸಾಲಿನಲ್ಲಿ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆಯಡಿಯಲ್ಲಿ ಹಂಗಾಮಿ ಹುದ್ದೆಗಳಿಗೆ ಅನುದಾನ ಒದಗಿಸಿಕೊಳ್ಳಲಾಗಿದೆ ಎಂದು ತಿಳಿಸಿ ಪಶುಪಾಲನಾ ಇಲಾಖೆಯು ಸೇವಾ ಇಲಾಖೆಯಾಗಿದ್ದು ದೇಶೀಯ ತಳಿಗಳ ಸಂರಕ್ಷಣೆ ಹಾಗೂ ಸಂವರ್ಧನೆಗಾಗಿ ವಿವಿಧ ಯೋಜನೆಗಳಡಿಯಲ್ಲಿರುವ ಹಂಗಾಮಿ ಹುದ್ದೆಗಳು ಅಗತ್ಯವಿರುವುದರಿಂದ ಯೋಜನೇತರ ಲೆಕ್ಕಶೀರ್ಷಿಕೆ ಅಡಿಯಲ್ಲಿನ ವಿವಿಧ ವೃಂದಗಳ 1004 ಹಂಗಾಮಿ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ.

2. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. 1004 ಹಂಗಾಮಿ ಹುದ್ದೆಗಳು ಇಲಾಖೆಯ ಕೇಂದ್ರ ಕಛೇರಿ, ಸಾಂಖ್ಯಿಕ ಸಂಗ್ರಹ, ಅಂಕಿ ಅಂಶ ಕಛೇರಿ ಹಾಗೂ ಜಾನುವಾರು ಕ್ಷೇತ್ರಗಳಂತಹ ಪ್ರಮುಖ ಸ್ಥಳಗಳಲ್ಲಿದ್ದು ಈ ಹುದ್ದೆಗಳು ಇಲಾಖೆಯ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆ ವ್ಯಾಪ್ತಿಗೆ ಒಳಪಟ್ಟಿದೆ. ಸದರಿ ಹುದ್ದೆಗಳನ್ನು ಇಲಾಖಾ ಕಾರ್ಯಕ್ರಮಗಳ ದೃಷ್ಟಿಯಿಂದ ದೀರ್ಘಕಾಲದಿಂದ ಅಂದರೆ ಸುಮಾರು 30–35 ವರ್ಷಗಳಿಂದ ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗುತ್ತಿದೆ. ಇಲಾಖಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಗೂ ಜಾನುವಾರು ಕ್ಷೇತ್ರಗಳಲ್ಲಿನ ವಿವಿಧ ಕೆಲಸಗಳನ್ನು ಕ್ರಮಬದ್ಧವಾಗಿ ನಿರ್ವಹಿಸಲು ಮತ್ತು ದೇಶೀಯ ತಳಿಗಳ ಸಂರಕ್ಷಣೆ / ಸಂವರ್ಧನೆಗೊಳಿಸುವ ನಿಟ್ಟಿನಲ್ಲಿ ಹಂಗಾಮಿ ಹುದ್ದೆಗಳನ್ನು ಖಾಯಂ ಆಗಿ ಮುಂದುವರೆಸುವುದು ಅತ್ಯವಶ್ಯಕವಾಗಿರುತ್ತದೆಂದು ಆಯುಕ್ತರು ಸಮರ್ಥನೆ (Justification) ನೀಡಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆ ಅಡಿ ಇರುವ 1004 ಹುದ್ದೆಗಳಲ್ಲಿ ಪ್ರಸ್ತುತ ಖಾಲಿ ಇರುವ 118 ವಿವಿಧ ವರ್ಗದ ಹುದ್ದೆಗಳನ್ನು ಹೊರತುಪಡಿಸಿ ಉಳಿದ 886 ಹುದ್ದೆಗಳನ್ನು ಮಾತ್ರ ಇಲಾಖಾ ಹಿತದೃಷ್ಟಿಯಿಂದ ಖಾಯಂ ಆಗಿ ಮುಂದುವರೆಸಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ**

3. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಇಲಾಖೆಯ ವಿವಿಧ ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಗೂ ಜಾನುವಾರು ಕ್ಷೇತ್ರಗಳ ಸಮರ್ಪಕ ನಿರ್ವಹಣೆಗಾಗಿ ಒಟ್ಟಾರೆ ಇಲಾಖಾ ಹಿತದೃಷ್ಟಿಯಿಂದ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ವಿವಿಧ ಯೋಜನೇತರ ಲೆಕ್ಕಶೀರ್ಷಿಕೆ ಅಡಿ ಇರುವ 1004 ಹಂಗಾಮಿ ಹುದ್ದೆಗಳಲ್ಲಿ ಖಾಲಿ ಇರುವ 118 ವಿವಿಧ ವರ್ಗದ ಹುದ್ದೆಗಳನ್ನು ಹೊರತುಪಡಿಸಿ ಅನುಬಂಧದಲ್ಲಿ ನಮೂದಿಸಿರುವ ಉಳಿದ 886 (ಎಂಟು ನೂರ ಎಂಭತ್ತಾರು) ಹುದ್ದೆಗಳನ್ನು ಮಾತ್ರ ಖಾಯಂ ಆಗಿ ಮುಂದುವರೆಸಲು ಅನುಮೋದನೆ ನೀಡಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 341 ವೆ.4/2010, ದಿನಾಂಕ:24–07–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ.ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ).

## ಅನುಬಂಧ

### ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 167 ಪಸಸೇ 2008, ದಿನಾಂಕ: 22–12–2010ಕ್ಕೆ

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 1 | 2403–102–01–06 | ಜರ್ಸಿ ತಳಿ ಸಂವರ್ಧನಾ ಕೇಂದ್ರ, ಕೂಡಿಗೆ ಕೊಡಗು ಜಿಲ್ಲೆ | ಉಪ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | – |
| | | | ಅಧೀಕ್ಷಕರು | – |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಕ್ಷೇತ್ರ ಸಹಾಯಕರು | – |
| | | | ಸಹಾಯಕ ಕೃಷಿ ಅಧಿಕಾರಿ | – |
| | | | ಪಶುವೈದ್ಯಕೀಯ ಪರೀಕ್ಷಕರು | – |
| | | | ವಾಹನ ಚಾಲಕರು | 3 |
| | | | ಮೆಕ್ಯಾನಿಕ್ | 1 |
| | | | ಡಿ–ದರ್ಜೆ ನೌಕರರು | – |
| | | | ಅಟೆಂಡರ್ | 10 |
| | | | ಮಿಲ್ಕ್ ಮ್ಯಾನ್ | 6 |
| | | | ಮಿಲ್ಕ್ ರೆಕಾರ್ಡರ್ | – |
| | | | ಒಟ್ಟು | 22 |
| 2 | 2403–00–800–0–23 | ಕೇಂದ್ರೀಯ ವೀರ್ಯ ಸಂಕಲನಾ ಕೇಂದ್ರ, ಬೀರೂರು ಚಿಕ್ಕಮಗಳೂರು ಜಿಲ್ಲೆ | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 1 |
| | | | ಪ್ರಯೋಗಾಲಯ ಸಹಾಯಕರು | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 1 |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 7 |
| | | | ಒಟ್ಟು | 15 |
| 3 | 2403–00–800–0–23 | ವೀರ್ಯ ಸಂಸ್ಕರಣಾ ಕೇಂದ್ರ, ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ (ಇಂಡೋ–ಡ್ಯಾನಿಷ್) | ಸಹಾಯಕ ನಿರ್ದೇಶಕರು | 1 |
| | | | ಪ್ರಥಮ ದರ್ಜೆ ಸಹಾಯಕರು | – |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 2 |
| | | | ಪಶುವೈದ್ಯಕೀಯ ಪರೀಕ್ಷಕರು | – |
| | | | ಪ್ರಯೋಗಾಲಯ ಸಹಾಯಕರು | – |
| | | | ಬೆರಳಚ್ಚುಗಾರರು | – |
| | | | ಡಿ–ದರ್ಜೆ ನೌಕರರು | – |
| | | | ಒಟ್ಟು | 4 |
| 4 | 2403–102–01–06 | ರಾಜ್ಯ ವಿರ್ಯ ಸಂಸ್ಕರಣಾ ಕೇಂದ್ರ, ಹೆಸರಘಟ್ಟ, ಬೆಂಗಳೂರು (ಇಂಡೋ–ಡ್ಯಾನಿಷ್) | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 1 |
| | | | ಒಟ್ಟು | 2 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 5 | 2403–102–01–06 | ಜಾನುವಾರು ಸಂವರ್ಧನಾ ಕೇಂದ್ರ, ಕೂಡಿಗೆ, ಕೊಡಗು ಜಿಲ್ಲೆ, (ಇಂಡೋ–ಡ್ಯಾನಿಷ್) | ಡಿ–ದರ್ಜೆ ನೌಕರರು | 1 |
| | | | ಒಟ್ಟು | 1 |
| 6 | 2403–102–01–06 | ಸಣ್ಣ ರೈತರ ಅಭಿವೃದ್ಧಿ ಯೋಜನೆ, ಕೇಂದ್ರ ಕಛೇರಿ, ಬೆಂಗಳೂರು. (ಇಂಡೋ–ಡ್ಯಾನಿಷ್) | ಉಪ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 1 |
| | | | ಅಧೀಕ್ಷಕರು | 1 |
| | | | ಶೀಘ್ರಲಿಪಿಗಾರರು | 1 |
| | | | ಒಟ್ಟು | 4 |
| 7 | 2403–00–102–1–06 | ಅಮೃತ್ ಮಹಲ್ ತಳಿ ಸಂವರ್ಧನಾ ಕೇಂದ್ರ, ಅಜ್ಜಂಪುರ, ಚಿಕ್ಕಮಗಳೂರು ಜಿಲ್ಲೆ, (ಇಂಡೋ ಡ್ಯಾನಿಷ್) | ಉಪ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 1 |
| | | | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | 2 |
| | | | ಪಶುವೈದ್ಯಕೀಯ ಪರೀಕ್ಷಕರು | 4 |
| | | | ಡಿ–ದರ್ಜೆ ನೌಕರರು | 5 |
| | | | ಒಟ್ಟು | 17 |
| 8 | 2403–00–113–0–01 | ಜನಕ ಮೌಲ್ಯ ನಿರ್ಣಯ ಕೋಶ, ಹೆಬ್ಬಾಳ, ಬೆಂಗಳೂರು | ಸಹಾಯಕ ನಿರ್ದೇಶಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 1 |
| | | | ಸಾಂಖ್ಯಿಕ ನಿರೀಕ್ಷಕರು | 1 |
| | | | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| | | | ಒಟ್ಟು | 6 |
| 9 | 2403–00–800–0–23 | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕುರಿಕುಪ್ಪಿ, ಬಳ್ಳಾರಿ ಜಿಲ್ಲೆ (ಮೇವು) | ಡಿ–ದರ್ಜೆ ನೌಕರರು | 3 |
| | | | ಒಟ್ಟು | 3 |
| 10 | 2403–00–101–0–01 | ದೊಡ್ಡರೋಗ ನಿವಾರಣಾ ಯೋಜನೆ, ಹೆಬ್ಬಾಳ, ಬೆಂಗಳೂರು | ಉಪ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 6 |
| | | | ಪಶುವೈದ್ಯಾಧಿಕಾರಿ | 6 |
| | | | ಅಧೀಕ್ಷಕರು | 2 |
| | | | ಪ್ರಥಮ ದರ್ಜೆ ಸಹಾಯಕರು | 3 |
| | | | ದ್ವಿತೀಯ ದರ್ಜೆ ಸಹಾಯಕರು | 3 |
| | | | ಹಿರಿಯ ಬೆರಳಚ್ಚುಗಾರರು | 1 |
| | | | ಬೆರಳಚ್ಚುಗಾರರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 10 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| | | | ಅಕೌಂಟೆಂಟ್ | 1 |
| | | | ಹಿರಿಯ ವಾಹನ ಚಾಲಕರು | 1 |
| | | | ವಾಹನ ಚಾಲಕರು | 5 |
| | | | ಡಿ–ದರ್ಜೆ ನೌಕರರು | 9 |
| | | | ಒಟ್ಟು | 49 |
| 11 | 2403–00–101–0–01 | ದೊಡ್ಡರೋಗ ನಿವಾರಣಾ ಯೋಜನೆ, ಕೇಂದ್ರ ಕಛೇರಿ, ಬೆಂಗಳೂರು | ಪ್ರಥಮ ದರ್ಜೆ ಸಹಾಯಕರು | 1 |
| | | | ಒಟ್ಟು | 1 |
| 12 | 2403–00–001–0–01 | ಕೇಂದ್ರ ಕಛೇರಿ, ಬೆಂಗಳೂರು. (ಯೋಜನೆ ಸಂ. 8) | ಸಹಾಯಕ ನಿರ್ದೇಶಕರು | 6 |
| | | | ಪಶುವೈದ್ಯಾಧಿಕಾರಿ | 1 |
| | | | ಕೇಂದ್ರ ಸ್ಥಾನಿಕ ಸಹಾಯಕರು | 1 |
| | | | ಆಡಳಿತ ಸಹಾಯಕರು | 2 |
| | | | ಅಧೀಕ್ಷಕರು | 12 |
| | | | ಪ್ರಥಮ ದರ್ಜೆ ಸಹಾಯಕರು | 20 |
| | | | ದ್ವಿತೀಯ ದರ್ಜೆ ಸಹಾಯಕರು | 20 |
| | | | ಹಿರಿಯ ಬೆರಳಚ್ಚುಗಾರರು | 7 |
| | | | ಬೆರಳಚ್ಚುಗಾರರು | 3 |
| | | | ಕಲಾಕಾರರು | 1 |
| | | | ಶೀಘ್ರಲಿಪಿಗಾರರು | 4 |
| | | | ಹಿರಿಯ ವಾಹನ ಚಾಲಕರು | 1 |
| | | | ಮೇವು ಅಭಿವೃದ್ಧಿ ಅಧಿಕಾರಿ | 2 |
| | | | ವಾಹನ ಚಾಲಕರು | 1 |
| | | | ಜಮೇದಾರ್ | 1 |
| | | | ಮುಚ್ಚಿ | 1 |
| | | | ಡಿ–ದರ್ಜೆ ನೌಕರರು | 27 |
| | | | ಒಟ್ಟು | 111 |
| 13 | 2403–00–113–0–01 | ಜಂಟಿ ನಿರ್ದೇಶಕರ ಕಛೇರಿ (ಅಂಕಿಅಂಶ) ಪಶುಪಾಲನಾ ಇಲಾಖೆ, ಬೆಂಗಳೂರು (ಜಾನುವಾರು ಗಣತಿ) | ಜಂಟಿ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ (ಮಾದರಿ ಸಮೀಕ್ಷೆ) | 4 |
| | | | ಅಧೀಕ್ಷಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 3 |
| | | | ದ್ವಿತೀಯ ದರ್ಜೆ ಸಹಾಯಕರು | 4 |
| | | | ಬೆರಳಚ್ಚುಗಾರರು | 2 |
| | | | ಸಾಂಖ್ಯಿಕ ಮೇಲ್ವಿಚಾರಕರು | – |
| | | | ಪಶುವೈದ್ಯಕೀಯ ಪರೀಕ್ಷಕರು | 21 |
| | | | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| | | | ಡಿ–ದರ್ಜೆ ನೌಕರರು | 3 |
| | | | ಒಟ್ಟು | 41 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 14 | 2403–00–103–0–01 | ರಾಜ್ಯ ಕುಕ್ಕುಟ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು. | ಉಪ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 3 |
| | | | ಕುಕ್ಕುಟ ಮೇಲ್ವಿಚಾರಕರು | 2 |
| | | | ಅಧೀಕ್ಷಕರು | 2 |
| | | | ಪ್ರಥಮ ದರ್ಜೆ ಸಹಾಯಕರು | 2 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 2 |
| | | | ಪಶುವೈದ್ಯಕೀಯ ಪರೀಕ್ಷಕರು | 3 |
| | | | ವಾಹನ ಚಾಲಕರು | 1 |
| | | | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| | | | ಡಿ–ದರ್ಜೆ ನೌಕರರು | 22 |
| | | | ಒಟ್ಟು | 40 |
| 15 | 2403–00–103–0–01 | ಪ್ರಾದೇಶಿಕ ಕುಕ್ಕುಟ ಕ್ಷೇತ್ರ, ಮಳವಳ್ಳಿ, ಮಂಡ್ಯ ಜಿಲ್ಲೆ | ಸಹಾಯಕ ನಿರ್ದೇಶಕರು | 1 |
| | | | ಕುಕ್ಕುಟ ಮೇಲ್ವಿಚಾರಕರು | 1 |
| | | | ಬೆರಳಚ್ಚುಗಾರರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 1 |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 5 |
| | | | ಒಟ್ಟು | 10 |
| 16 | 2403–00–103–0–01 | ಪ್ರಾದೇಶಿಕ ಕುಕ್ಕುಟ ಕ್ಷೇತ್ರ, ಗಂಗಾವತಿ, ಕೊಪ್ಪಳ ಜಿಲ್ಲೆ. | ಸಹಾಯಕ ನಿರ್ದೇಶಕರು | 1 |
| | | | ಕುಕ್ಕುಟ ಮೇಲ್ವಿಚಾರಕರು | 1 |
| | | | ಬೆರಳಚ್ಚುಗಾರರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 2 |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 5 |
| | | | ಒಟ್ಟು | 11 |
| 17 | 2403–00–103–0–01 | ಹ್ಯಾಚರೀಸ್, ಕೇಂದ್ರ ಕಛೇರಿ, ಬೆಂಗಳೂರು. | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ವಾಹನ ಚಾಲಕರು | – |
| | | | ಡಿ–ದರ್ಜೆ ನೌಕರರು | – |
| | | | ಒಟ್ಟು | 4 |
| 18 | 2403–00–103–0–01 | ಕ್ಯೂ.ಸಿ.ಪಿ.ಎಫ್. ಕೇಂದ್ರ ಕಛೇರಿ, ಬೆಂಗಳೂರು. | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 2 |
| | | | ಅಧೀಕ್ಷಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಡಿ–ದರ್ಜೆ ನೌಕರರು | 2 |
| | | | ಒಟ್ಟು | 8 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 19 | 2403–00–105–01 | ಹಂದಿ ತಳಿ ಸಂವರ್ಧನಾ ಕ್ಷೇತ್ರ, ಕೂಡಿಗೆ, ಕೊಡಗು ಜಿಲ್ಲೆ | ಪಶುವೈದ್ಯಾಧಿಕಾರಿ | 1 |
| | | | ಪಶುವೈದ್ಯಕೀಯ ಪರೀಕ್ಷಕರು | 1 |
| | | | ಡಿ–ದರ್ಜೆ ನೌಕರರು | 5 |
| | | | ಒಟ್ಟು | 7 |
| 20 | 2403–00–105–01 | ಹಂದಿ ತಳಿ ಸಂವರ್ಧನಾ ಕ್ಷೇತ್ರ, ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ | ಪಶುವೈದ್ಯಾಧಿಕಾರಿ | – |
| | | | ಪಶುವೈದ್ಯಕೀಯ ಪರೀಕ್ಷಕರು | – |
| | | | ವಾಹನ ಚಾಲಕರು | – |
| | | | ಡಿ–ದರ್ಜೆ ನೌಕರರು | 3 |
| | | | ಒಟ್ಟು | 3 |
| 21 | 2403–00–105–01 | ಹಂದಿ ತಳಿ ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು. | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 2 |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 10 |
| | | | ಒಟ್ಟು | 15 |
| 22 | 2403–00–105–01 | ಹಂದಿ ತಳಿ ಕ್ಷೇತ್ರ, ಕೇಂದ್ರ ಕಛೇರಿ, ಬೆಂಗಳೂರು. | ಸಹಾಯಕ ನಿರ್ದೇಶಕರು | 1 |
| | | | ಹಿರಿಯ ಬೆರಳಚ್ಚುಗಾರರು | 1 |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 1 |
| | | | ಒಟ್ಟು | 4 |
| 23 | 2403–00–109–01 | ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ತುಮಕೂರು | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | – |
| | | | ಬೆರಳಚ್ಚುಗಾರರು | 1 |
| | | | ಡಿ–ದರ್ಜೆ ನೌಕರರು | 1 |
| | | | ಒಟ್ಟು | 4 |
| 24 | 2403–00–109–01 | ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ಹಾಸನ. | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ಡಿ–ದರ್ಜೆ ನೌಕರರು | 2 |
| | | | ಒಟ್ಟು | 7 |
| 25 | 2403–00–109–01 | ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ಧಾರವಾಡ | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ಡಿ–ದರ್ಜೆ ನೌಕರರು | 2 |
| | | | ಒಟ್ಟು | 6 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 26 | 2403–00–109–01 | ಪಶುವೈದ್ಯಕೀಯ ಪರೀಕ್ಷಕರ ತರಬೇತಿ ಕೇಂದ್ರ, ಗುಲ್ಬರ್ಗಾ. | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ಡಿ–ದರ್ಜೆ ನೌಕರರು | 2 |
| | | | ಒಟ್ಟು | 6 |
| 27 | 2403–00–109–01 | ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ದಾವಣಗೆರೆ | ಪಶುವೈದ್ಯಾಧಿಕಾರಿ | 1 |
| | | | ದ್ವಿತೀಯ ದರ್ಜೆ ಸಹಾಯಕರು | 2 |
| | | | ಡಿ–ದರ್ಜೆ ನೌಕರರು | 1 |
| | | | ಒಟ್ಟು | 4 |
| 28 | 2403–00–109–01 | ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ಮಳವಳ್ಳಿ | ಪಶುವೈದ್ಯಾಧಿಕಾರಿ | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಡಿ–ದರ್ಜೆ ನೌಕರರು | 1 |
| | | | ಒಟ್ಟು | 3 |
| 29 | 2403–00–109–01 | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕೊಯ್ಲಾ (109–01) | ಪಶುವೈದ್ಯಾಧಿಕಾರಿ | – |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಒಟ್ಟು | 1 |
| 30 | 2403–00–109–01 | ರೈತರ ತರಬೇತಿ ಕೇಂದ್ರ, ಬೀದರ್ | ಪಶುವೈದ್ಯಾಧಿಕಾರಿ | 1 |
| | | | ಒಟ್ಟು | 1 |
| 31 | 2403–00–109–01 | ಪಶುವೈದ್ಯಕೀಯ ಸಹಾಯಕರ ತರಬೇತಿ ಕೇಂದ್ರ, ಬೆಳಗಾವಿ. | ಪಶುವೈದ್ಯಾಧಿಕಾರಿ | 1 |
| | | | ಬೆರಳಚ್ಚುಗಾರರು | 1 |
| | | | ಡಿ–ದರ್ಜೆ ನೌಕರರು | 1 |
| | | | ಒಟ್ಟು | 3 |
| 32 | 2403–00–800–0–23 | ತಳಿ ಸಂವರ್ಧನಾ ಕೇಂದ್ರ, ಕೊಯ್ಲಾ, ದಕ್ಷಿಣ ಕನ್ನಡ ಜಿಲ್ಲೆ (800–23) | ಉಪ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 1 |
| | | | ಅಧೀಕ್ಷಕರು | 1 |
| | | | ಬೆರಳಚ್ಚುಗಾರರು | 2 |
| | | | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 1 |
| | | | ಕೃಷಿ ಸಹಾಯಕರು | 1 |
| | | | ಹಿರಿಯ ವಾಹನ ಚಾಲಕರು | 2 |
| | | | ವಾಹನ ಚಾಲಕರು | 2 |
| | | | ಮಿಲ್ಕ್ ರೆಕಾರ್ಡಿಂಗ್ ಅಸಿಸ್ಟೆಂಟ್ | 3 |
| | | | ಡಿ–ದರ್ಜೆ ನೌಕರರು | 8 |
| | | | ಕಾವಲುಗಾರ | 3 |
| | | | ಒಟ್ಟು | 26 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 33 | 2403–00–800–0–23 | ಅಮೃತ್ ಮಹಲ್ ತಳಿ ಸಂವರ್ಧನಾ ಕೇಂದ್ರ, ಅಜ್ಜಂಪುರ, ಚಿಕ್ಕಮಗಳೂರು ಜಿಲ್ಲೆ (800–23) | ಸಹಾಯಕ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿ | 1 |
| | | | ಸಹಾಯಕ ಕೃಷಿ ಅಧಿಕಾರಿ | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 2 |
| | | | ಮೆಕ್ಯಾನಿಕ್ | 1 |
| | | | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 3 |
| | | | ವಾಹನ ಚಾಲಕರು | 4 |
| | | | ಮಿಲ್ಕ್ ರೆಕಾರ್ಡಿಂಗ್ ಅಸಿಸ್ಟೆಂಟ್ | 2 |
| | | | ಡಿ–ದರ್ಜೆ ನೌಕರರು | 14 |
| | | | ಒಟ್ಟು | 32 |
| 34 | 2403–00–800–0–23 | ಹಳ್ಳಿಕಾರ್ ತಳಿ ಸಂವರ್ಧನಾ ಕೇಂದ್ರ, ಕುಣಿಕೇನಹಳ್ಳಿ, ತುರುವೇಕೆರೆ ತಾಲ್ಲೂಕು, ತುಮಕೂರು ಜಿಲ್ಲೆ (800–23) | ಉಪ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿಗಳು | 1 |
| | | | ಅಧೀಕ್ಷಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 2 |
| | | | ಪಶುವೈದ್ಯಕೀಯ ಪರೀಕ್ಷಕರು | 3 |
| | | | ವಾಹನ ಚಾಲಕರು | 3 |
| | | | ಡಿ–ದರ್ಜೆ ನೌಕರರು | 10 |
| | | | ಒಟ್ಟು | 23 |
| 35 | 2403–00–800–0–23 | ರಾಜ್ಯ ವೀರ್ಯ ಸಂಸ್ಕರಣಾ ಕೇಂದ್ರ, ಹೆಸರಘಟ್ಟ, ಬೆಂಗಳೂರು. (800–23) | ಉಪ ನಿರ್ದೇಶಕರು | 1 |
| | | | ಸಹಾಯಕ ನಿರ್ದೇಶಕರು | 2 |
| | | | ಪಶುವೈದ್ಯಾಧಿಕಾರಿಗಳು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | 2 |
| | | | ಪಶುವೈದ್ಯಕೀಯ ಪರೀಕ್ಷಕರು | – |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 20 |
| | | | ಒಟ್ಟು | 30 |
| 36 | 2403–00–800–0–23 | ಖಿಲ್ಲಾರ್ ತಳಿ ಸಂವರ್ಧನಾ ಕೇಂದ್ರ, ಬಂಕಾಪುರ, ಹಾವೇರಿ ಜಿಲ್ಲೆ (800–23) | ಪಶುವೈದ್ಯಕೀಯ ಪರೀಕ್ಷಕರು | 2 |
| | | | ಕೃಷಿ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ವಾಹನ ಚಾಲಕರು | 1 |
| | | | ಡಿ–ದರ್ಜೆ ನೌಕರರು | 6 |
| | | | ಒಟ್ಟು | 11 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| **37** | **2403–00–800–0–23** | ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ ಬೆಂಗಳೂರು. (800–23) | ಉಪ ನಿರ್ದೇಶಕರು | **1** |
| | | | ಸಹಾಯಕ ನಿರ್ದೇಶಕರು | **4** |
| | | | ಪಶುವೈದ್ಯಾಧಿಕಾರಿಗಳು | **2** |
| | | | ಕಛೇರಿ ವ್ಯವಸ್ಥಾಪಕರು | **1** |
| | | | ಅಧೀಕ್ಷಕರು | **2** |
| | | | ದ್ವಿತೀಯ ದರ್ಜೆ ಸಹಾಯಕರು | **2** |
| | | | ಬೆರಳಚ್ಚುಗಾರರು | **2** |
| | | | ಮಿಲ್ಕ್ ರೆಕಾರ್ಡರ್ | **1** |
| | | | ಸ್ಟೋರ್ ಕೀಪರ್ | **1** |
| | | | ಶೀಘ್ರಲಿಪಿಗಾರರು | **–** |
| | | | ಸಹಾಯಕ ಕೃಷಿ ಅಧಿಕಾರಿ | **1** |
| | | | ಕೃಷಿ ಸಹಾಯಕರು | **–** |
| | | | ಪಶುವೈದ್ಯಕೀಯ ಪರೀಕ್ಷಕರು | **7** |
| | | | ಸಹಾಯಕ ಅಭಿಯಂತರರು | **1** |
| | | | ಲ್ಯಾಬ್ ಟೆಕ್ನೀಷಿಯನ್ | **–** |
| | | | ಲ್ಯಾಬ್ ಅಸಿಸ್ಟೆಂಟ್ | **1** |
| | | | ಮೆಕ್ಯಾನಿಕ್ | **1** |
| | | | ಕೃಷಿ ಡೆಮಾನ್ಸ್ಟ್ರೇಟರ್ | **1** |
| | | | ಹಿರಿಯ ವಾಹನ ಚಾಲಕರು | **3** |
| | | | ವಾಹನ ಚಾಲಕರು | **3** |
| | | | ಸಹಾಯಕ ಫಿಟ್ಟರ್ | **1** |
| | | | ಜಮೇದಾರ್ | **3** |
| | | | ಮೇಸ್ತ್ರಿ | **1** |
| | | | ಅಡಿಗೆಯವ | **1** |
| | | | ಗೆಸ್ಟ್ ಹೌಸ್ ಸಹಾಯಕ | **1** |
| | | | ಮಿಲ್ಕ್ ರೆಕಾರ್ಡಿಂಗ್ ಅಸಿಸ್ಟೆಂಟ್ | **2** |
| | | | ಕಾವಲುಗಾರ | **1** |
| | | | ಡೈರಿ ಮ್ಯಾನ್ | **16** |
| | | | ಲ್ಯಾಬ್ ಅಟೆಂಡರ್ | **1** |
| | | | ಗೌಳೀಸ್ | **2** |
| | | | ಡಿ–ದರ್ಜೆ ನೌಕರರು | **16** |
| | | | ಒಟ್ಟು | **79** |
| 38 | 2403–00–800–0–23 | ಜಾನುವಾರು ತಳಿ ಸಂವರ್ಧನಾ ಕೇಂದ್ರ, ಹೆಸರಘಟ್ಟ, ಬೆಂಗಳೂರು. **(800–23)** | ಉಪ ನಿರ್ದೇಶಕರು | **1** |
| | | | ಸಹಾಯಕ ನಿರ್ದೇಶಕರು | **2** |
| | | | ಡೈರಿ ಮ್ಯಾನೇಜರ್ | **1** |
| | | | ಅಧೀಕ್ಷಕರು | **1** |
| | | | ದ್ವಿ.ದ.ಸ. | **2** |
| | | | ಪಶುವೈದ್ಯಕೀಯ ಮೇಲ್ವಿಚಾರಕರು | **1** |
| | | | ವಾಹನ ಚಾಲಕರು | **2** |
| | | | ಡಿ–ದರ್ಜೆ ನೌಕರರು | **53** |
| | | | ಒಟ್ಟು | **63** |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 39 | 2403–00–800–0–23 | ಜಾನುವಾರು ತಳಿ ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಮುನಿರಾಬಾದ್. ಕೊಪ್ಪಳ ಜಿಲ್ಲೆ. (800–23) | ಉಪ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿಗಳು | 2 |
| | | | ಅಧೀಕ್ಷಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಬೆರಳಚ್ಚುಗಾರರು | 1 |
| | | | ಸಹಾಯಕ ಕೃಷಿ ಅಧಿಕಾರಿ | 1 |
| | | | ಪಶುವೈದ್ಯಕೀಯ ಪರೀಕ್ಷಕರು | 8 |
| | | | ವಾಹನ ಚಾಲಕರು | 3 |
| | | | ಡಿ–ದರ್ಜೆ ನೌಕರರು | 17 |
| | | | ಫೀಲ್ಡ್ ಲೇಬರರ್ | 25 |
| | | | ಡಿ–ದರ್ಜೆ ನೌಕರರು (ಸೂಪರ್‌ನ್ಯೂಮರಿ) | 5 |
| | | | ಲ್ಯಾಬ್ ಅಟೆಂಡರ್ | 1 |
| | | | ಪರ್ಮನೆಂಟ್ ಲೇಬರರ್ | 6 |
| | | | ಗೌಳೀಸ್ | 1 |
| | | | ಸ್ವೀಪರ್ | 2 |
| | | | ಒಟ್ಟು | 76 |
| **40** | **2403–00–800–0–23** | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕುರಿಕುಪ್ಪಿ, ಬಳ್ಳಾರಿ ಜಿಲ್ಲೆ (800–23) | ಉಪ ನಿರ್ದೇಶಕರು | 1 |
| | | | ಪಶುವೈದ್ಯಾಧಿಕಾರಿಗಳು | 1 |
| | | | ಸಹಾಯಕ ಕೃಷಿ ಅಧಿಕಾರಿ | – |
| | | | ಅಧೀಕ್ಷಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 2 |
| | | | ಟೆಕ್ನೀಷಿಯನ್ | 1 |
| | | | ಬೆರಳಚ್ಚುಗಾರರು | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 3 |
| | | | ವಾಹನ ಚಾಲಕರು | – |
| | | | ಡಿ–ದರ್ಜೆ ನೌಕರರು | 34 |
| | | | ಒಟ್ಟು | 45 |
| **41** | **2403–00–800–0–23** | ಎಮ್ಮೆ ತಳಿ ಸಂವರ್ಧನಾ ಕೇಂದ್ರ, ತೇಗೂರು, ಧಾರವಾಡ ಜಿಲ್ಲೆ (800–23) | ಉಪ ನಿರ್ದೇಶಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 1 |
| | | | ಹಿರಿಯ ಪಶುವೈದ್ಯಕೀಯ ಪರೀಕ್ಷಕರು | – |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಫೀಲ್ಡ್ ಅಸಿಸ್ಟೆಂಟ್ | 1 |
| | | | ಡಿ–ದರ್ಜೆ ನೌಕರರು | 6 |
| | | | ಡಿ–ದರ್ಜೆ ನೌಕರರು ಸೂಪರ್‌ನ್ಯೂಮರಿ | 7 |
| | | | ಒಟ್ಟು | 18 |

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಕಛೇರಿ | ಹುದ್ದೆಯ ಪದನಾಮ | ಹುದ್ದೆಯ ಸಂಖ್ಯೆ |
|---|---|---|---|---|
| 1 | 2 | 3 | 4 | 6 |
| 42 | 2403–00–800–0–23 | ಕೇಂದ್ರೀಯ ವೀರ್ಯ ಸಂಕಲನಾ ಕೇಂದ್ರ, ಧಾರವಾಡ (800–23) | ಸಹಾಯಕ ನಿರ್ದೇಶಕರು | 2 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ಪಶುವೈದ್ಯಕೀಯ ಮೇಲ್ವಿಚಾರಕರು | 2 |
| | | | ಪಶುವೈದ್ಯಕೀಯ ಪರೀಕ್ಷಕರು | 1 |
| | | | ವಾಹನ ಚಾಲಕರು | 2 |
| | | | ಡಿ–ದರ್ಜೆ ನೌಕರರು | 13 |
| | | | ಒಟ್ಟು | 21 |
| 43 | 2403–00–800–0–23 | ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಧಾರವಾಡ (800–23) | ಉಪ ನಿರ್ದೇಶಕರು | 1 |
| | | | ಪ್ರಥಮ ದರ್ಜೆ ಸಹಾಯಕರು | 1 |
| | | | ದ್ವಿತೀಯ ದರ್ಜೆ ಸಹಾಯಕರು | 1 |
| | | | ವಾಹನ ಚಾಲಕರು | 1 |
| | | | ಟ್ರಾಕ್ಟರ್ ವಾಹನ ಚಾಲಕರು | 1 |
| | | | ಪಶುವೈದ್ಯಕೀಯ ಪರೀಕ್ಷಕರು | 1 |
| | | | ಡಿ–ದರ್ಜೆ ನೌಕರರು | 21 |
| | | | ಡಿ–ದರ್ಜೆ ನೌಕರರು (ಸೂಪರ್‌ನ್ಯೂಮರಿ) | 1 |
| | | | ಒಟ್ಟು | 28 |
| 44 | 2403–00–800–0–23 | ಕೇಂದ್ರ ಕಛೇರಿ ಬೆಂಗಳೂರು (800–23) | ಅಧೀಕ್ಷಕರು | 2 |
| | | | ಪ್ರಥಮ ದರ್ಜೆ ಸಹಾಯಕರು | 6 |
| | | | ದ್ವಿತೀಯ ದರ್ಜೆ ಸಹಾಯಕರು | 4 |
| | | | ಶೀಘ್ರಲಿಪಿಗಾರರು | 1 |
| | | | ವಾಹನ ಚಾಲಕರು | 2 |
| | | | ಡಿ–ದರ್ಜೆ ನೌಕರರು | 6 |
| | | | ಒಟ್ಟು | 21 |
| ಒಟ್ಟು ಹುದ್ದೆಗಳು | | | | 886 |

**ಎಂ.ಪಿ.ನಾಗರಾಜ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ).

ಪಿ.ಆರ್.6

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಅಧಿಸೂಚನೆ

**ಸಂಖ್ಯೆ:ಆಕುಕ 303 ಹೆಚ್‌ಎಸ್‌ಹೆಚ್ 2010, ಬೆಂಗಳೂರು, ದಿನಾಂಕ:09–09–2010**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ/59/ಆರ್‌ಟಿಬಿ/2009 ದಿನಾಂಕ: 17/06/2010 ರಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ರೋಸ್ಟರ್ ಅನ್ವಯ ಕೌನ್ಸಿಲಿಂಗ್ ಮುಖಾಂತರ ಸ್ಥಳನೇಮಕಾತಿ ಮಾಡಲು ಉದ್ದೇಶಿಸಿ, ದಿನಾಂಕ:09/08/2010 ಮತ್ತು 10/08/2010 ರಂದು ಕೌನ್ಸಿಲಿಂಗ್ ನಡೆಸಿ ಸ್ಥಳ ಆಯ್ಕೆಮಾಡಿಕೊಂಡ 141 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಯಿತು. ಈ ಮಧ್ಯೆ ನೇಮಕಾತಿ ರೋಸ್ಟರ್ ಅನ್ವಯ ಕೌನ್ಸಿಲಿಂಗ್ ಮುಖಾಂತರ ಸ್ಥಳ ನೇಮಕಾತಿ ಮಾಡುತ್ತಿರುವುದನ್ನು ಪ್ರಶ್ನಿಸಿ, ಕೆಲವು ಅಭ್ಯರ್ಥಿಗಳು ಮಾನ್ಯ ಕರ್ನಾಟಕ ಆಡಳಿತ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 5250/2010 ಮತ್ತು 5324/2010 ದಾಖಲಿಸಿದ್ದು, ನ್ಯಾಯ ಮಂಡಳಿಯು ದಿನಾಂಕ:10/08/2010ರ ಮಧ್ಯಂತರ ಆದೇಶದಲ್ಲಿ ದಿನಾಂಕ:11/08/2010 ರಿಂದ 13/08/2010ರ ವರೆಗೆ ಕೌನ್ಸಿಲಿಂಗ್‌ನಲ್ಲಿ ಸ್ಥಳ ಆಯ್ಕೆ

ಮಾಡಿಕೊಂಡವರಿಗೆ ಈ ಅರ್ಜಿಯು ತೀರ್ಮಾನವಾಗುವವರೆಗೆ ನೇಮಕಾತಿ ಆದೇಶ ಹೊರಡಿಸಬಾರದೆಂದು ನಿರ್ದೇಶಿಸಿದ್ದುದರಿಂದ ನೇಮಕಾತಿ ಆದೇಶ ಹೊರಡಿಸುವುದನ್ನು ತಡೆಹಿಡಿಯಲಾಗಿತ್ತು.

ಮೇಲ್ಕಂಡ ಅರ್ಜಿಗಳಲ್ಲಿ ಮಾನ್ಯ ನ್ಯಾಯ ಮಂಡಳಿಯು ದಿನಾಂಕ:01/09/2010 ರ ಅಂತಿಮ ತೀರ್ಪಿನಲ್ಲಿ ಅರ್ಜಿದಾರರ ಕೋರಿಕೆಯನ್ನು ಸರ್ವೋಚ್ಚ ನ್ಯಾಯಾಲಯದ ತೀರ್ಮಾನದ ಹಿನ್ನೆಲೆಯಲ್ಲಿ ಮಾನವೀಯತೆ ದೃಷ್ಟಿಯಿಂದ ಪರಿಗಣಿಸುವಂತೆ ತಿಳಿಸಿ ಅರ್ಜಿಗಳನ್ನು ವಜಾ ಮಾಡಿದೆ ಹಾಗೂ ಸರ್ಕಾರ ಕೈಗೊಂಡ ಕೌನ್ಸಿಲಿಂಗ್ ಕ್ರಮವನ್ನು ಎತ್ತಿಹಿಡಿದಿದೆ. ಈ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ದಿನಾಂಕ:08/09/2010 ರಂದು ಪುನರ್ ಕೌನ್ಸಿಲಿಂಗ್ ನಡೆಸಿ ಮರು ಸ್ಥಳ ಆಯ್ಕೆ ಮಾಡಿಕೊಂಡ ಅನ್ವಯ ಹಾಗೂ ಈಗಾಗಲೇ ದಿನಾಂಕ:11/08/2010 ರಿಂದ 13/08/2010 ರ ವರೆಗೆ ನಡೆದ ಕೌನ್ಸಿಲಿಂಗ್‌ನಲ್ಲಿ ಸ್ಥಳ ಆಯ್ಕೆ ಮಾಡಿಕೊಂಡು ನೇಮಕಾತಿ ಆದೇಶ ಹೊರಡಿಸುವುದಕ್ಕೆ ತಡೆಹಿಡಿದಿದ್ದ ನೇಮಕಾತಿ ಆದೇಶಗಳನ್ನು ಸೇರಿಸಿ ಅನುಬಂಧದಲ್ಲಿನ 232 ಅಭ್ಯರ್ಥಿಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ವೇತನ ಶ್ರೇಣಿ ರೂ.14050–350–14400–400–16800–450–19500–525–22650–600–25050ರಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಗೆ ಒಳಪಟ್ಟು ಈ ಕೆಳಕಂಡ ಷರತ್ತುಗಳನ್ವಯ ನೇಮಕಾತಿ ಮಾಡಲಾಗಿದೆ.

(1) ನೇಮಕವಾದ ಅಭ್ಯರ್ಥಿಯು ಈ ಆದೇಶ ತಲುಪಿದ 15 ದಿನಗಳೊಳಗಾಗಿ ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ನಿಗದಿತ ಅವಧಿಯೊಳಗೆ ಹಾಜರಾಗದಿದ್ದಲ್ಲಿ, ಇವರ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18(3) ಅನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

(2) ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಸಂಬಂಧಪಟ್ಟ ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

(3) ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

(4) ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನೇಮಕಗೊಂಡ ಅಭ್ಯರ್ಥಿಯು ಕಡ್ಡಾಯವಾಗಿ 6 ವರ್ಷಗಳ ಕಾಲ ಗ್ರಾಮಾಂತರ ಪ್ರದೇಶಗಳಲ್ಲಿ ಸೇವೆ ಸಲ್ಲಿಸತಕ್ಕದ್ದು.

(5) ಈ ನೇಮಕಾತಿಯು ಅಭ್ಯರ್ಥಿಯ ವೈದ್ಯಕೀಯ ದೃಢತೆ ಪ್ರಮಾಣ ಪತ್ರ, ಪೂರ್ವಾಪರ ನಡವಳಿಕೆ ಬಗ್ಗೆ ಪೋಲೀಸ್ ವರದಿ ಮತ್ತು ಜಾತಿ ಹಾಗೂ ಆದಾಯ ಸಿಂಧುತ್ವ ಪ್ರಮಾಣ ಪತ್ರ ತನಿಖೆಗೆ ಒಳಪಟ್ಟಿರುತ್ತದೆ. ಈ ಅಭ್ಯರ್ಥಿಗಳ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಾಗಿದ್ದಲ್ಲಿ ಹಾಗೂ ಜಾತಿ ಹಾಗೂ ಸಿಂಧುತ್ವ ಪ್ರಮಾಣ ಪತ್ರದಲ್ಲಿ ಲೋಪದೋಷಗಳು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಮುನ್ಸೂಚನೆಯಿಲ್ಲದೆ ರದ್ದುಗೊಳಿಸಲಾಗುವುದು.

(6) ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅಭ್ಯರ್ಥಿಯು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಮುಂದೆ ಅನುಬಂಧ–2 ರಲ್ಲಿದ್ದಂತೆ ಭಾರತೀಯ ಸಂವಿಧಾನದ ಹೆಸರಿನಲ್ಲಿ ಪ್ರತಿಜ್ಞೆ ಸ್ವೀಕರಿಸತಕ್ಕದ್ದು.

(7) ಅಭ್ಯರ್ಥಿಯ ಜೇಷ್ಠತೆಯು ಕರ್ನಾಟಕ ಲೋಕ ಸೇವಾ ಆಯೋಗ ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

(8) ಈ ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 2447/2010 ಮತ್ತು 2521/2010 ರ ಅಂತಿಮ ತೀರ್ಪಿನ ಷರತ್ತಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು–1)

**ANNEXURE - II**

I, Dr: ------------------------------------------------------------------- Declare as under:

i. That I am unmarried/ a Widow

ii. That I am married and have only one wife living

iii. That I am married and have more than one wife living Application for grant of exemption is enclosed

iv. That I am married and that during the life time of my Spouse I have contracted another marriage. Application for grant of exemption is enclosed.

**2 I solemnly affirm that the above declaration is true and I understand that in the event of the Declaration being found to be incorrect after my appointment, I shall be liable to be dismissed from service.

Date: Signature

